**BANDANI**

A poems written by: **D Nanjunda**, Principal,
Government PU College, Kolsirsi, Siddapura Tq, Uttara Kannada District

Published by: **Nanda Prakashana**,
Devagiri Layout, Mankalale,
Sagara Tq, Shivamogga Dt. Cell. 9449427528
Email: devarabhattananjunda@gmail.com

1st impression: 2019
Pages:
Price:Rs.130/-
Book size :1/8 Demy 70 GSM Maplitho
Cover Page: Akshara Printers
DTP: Ankitha

**ನಂದಾ ಪ್ರಕಾಶನ**
ದೇವಗಿರಿನಗರ, ಮಂಕಳಲೆ
ಸಾಗರ –577401
ಶಿವಮೊಗ್ಗ ಜಿಲ್ಲೆ

ಮುದ್ರಣ : **ಅಕ್ಷರ ಆಫ್ಸೆಟ್ ಆಟೋಮೊಬೈಲ್ ಪ್ರಿಂಟರ್ಸ್**
ನಂ. 35, ಮಂಗಳಬೀಸು ಆಟೋಕಾಂಪ್ಲೆಕ್ಸ್, ಬೈಪಾಸ್ ರಸ್ತೆ
ಸಾಗರ –577401, ಶಿವಮೊಗ್ಗ ಜಿಲ್ಲೆ
ಮೊ: 95355 83039

# ಮುನ್ನುಡಿ,

ಶ್ರೀ ಡಿ. ನಂಜುಂಡ ಅವರು ತಮ್ಮ ಮೊದಲ ಕವನ ಸಂಕಲನ "ಹೊಸ ಅಕ್ಷರ"ವನ್ನ ಹೊರತಂದ ಆರು ವರ್ಷಗಳ ನಂತರ ತಮ್ಮ ಎರಡನೇ ಕವನ ಸಂಕಲನ "ಬಾನ್ದನಿ"ಯನ್ನ ಹೊರ ತರುತ್ತಿದ್ದಾರೆ. ತುಂಬಾ ಸರಳವಾಗಿ ಸುಂದರವಾಗಿ ಸುಲಭವಾಗಿ ಬರೆಯಬಲ್ಲ ಈ ಕವಿ ಬರೆಯುವ ವಿಷಯದಲ್ಲಿ ಈ ಜಿಪುಣತನವನ್ನ ಏಕೆ ತೋರ್ಪಡಿಸುತ್ತಾರೋ ನನಗೆ ಅರ್ಥವಾಗಿಲ್ಲ. ಆದರೆ ಇವರೊಂದಿಗೆ ಮಾತನಾಡುವಾಗ ತಿಳಿದು ಬಂದ ವಿಷಯವೆಂದರೆ ಇವರ ಕಾವ್ಯ ರಚನೆ ನಿರಂತರ ನಡೆಯುತ್ತಲೇ ಇರುತ್ತದೆ. ಆದರೆ ಬರೆದುದನ್ನ ಜೋಡಿಸಿ, ಒಂದು ಕಡೆ ಸಂಗ್ರಹಿಸಿ ಅದಕ್ಕೊಂದು ಸಂಕಲನದ ರೂಪು ಕೊಡುವಲ್ಲಿ ಇವರಿಗೆ ಇರುವ ನಿರಾಸಕ್ತಿ ಈ ವಿಳಂಬಕ್ಕೆ ಕಾರಣ ಅನ್ನುವುದು ಸ್ಪಷ್ಟವಾಯಿತು. ಇರಲಿ ಅವರು ಈ ಜಡತ್ವವನ್ನ ತೊರೆದು "ಬಾನ್ದನಿ"ಗೆ ಅವಕಾಶ ಮಾಡಿ ಕೊಟ್ಟರಲ್ಲ ಅದು ಸಂತಸದ ವಿಷಯ.

ಮೇಲೆ ನಾನು ನಂಜುಂಡ ಅವರು ತುಂಬಾ ಸರಳವಾಗಿ, ಸುಂದರವಾಗಿ, ಸುಲಭವಾಗಿ ಬರೆಯುತ್ತಾರೆ ಎಂಬ ಮಾತನ್ನ ಹೇಳಿದೆ. ಇದು ಉತ್ಪ್ರೇಕ್ಷೆಯ ಮಾತಲ್ಲ. ಇವರ ಮೊದಲ ಸಂಕಲನ "ಹೊಸ ಅಕ್ಷರ"ಕ್ಕೆ ಮುನ್ನುಡಿಯನ್ನ ಬರೆದ ನನ್ನ ಸ್ನೇಹಿತರಾದ ಡಾ. ಹಾ. ಉಮೇಶ್ ಸೊರಬ ಅವರು "ಭಾವ, ಭಾಷೆ, ಬಂಧ ಮೊದಲಾದ ಕಾವ್ಯ ಪರಿಕರಗಳೊಂದಿಗೆ ಲಯ ಪ್ರಾಧಾನ್ಯವನ್ನೂ, ಗೇಯಗುಣವನ್ನೂ ಉಳಿಸಿ ಕೊಂಡು ಇಲ್ಲಿಯ ರಚನೆಗಳು ಭಾವಗೀತೆಗಳಾಗಿ ಗಮನ ಸೆಳೆಯುತ್ತವೆ" ಎಂಬ ಮಾತನ್ನ ಹೇಳುತ್ತಾರೆ. ಈ ಮಾತು "ಬಾನ್ದನಿ"ಯಲ್ಲಿ ಕೂಡ ನಿಜವಾಗಿದೆ. ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳ ಮೇಲೆ ಪ್ರಭುತ್ವವನ್ನ ಹೊಂದಿರುವ ಈ ಕವಿಗೆ ಕಾವ್ಯ ರಚನೆ ಸುಲಭ ಮತ್ತು ಸರಳ. ಅವರೇ ಹೇಳುವ ಹಾಗೆ_

ಉಸಿರ ಕಣದಲಿ ಬೆರೆತು ರಸವಾಗಿ ಜಿನುಜಿನುಗಿ
ಸೋಸಿ ನಿಲ್ಲುತ ಸ್ವರವು ಬಾಗಿ ಬರಲಿ
ಬಸುರಿನಲಿ ಅಣು ಮೊಳೆತು ತಾ ಜೀವ ತಳೆವಂತೆ
ಹೊಸಗವಿತೆ ಕೂಸಾಗಿ ಎದೆಗೆ ಬರಲಿ
(ಹೊಸಗವಿತೆ)

ಅವರು ಮತ್ತೂ ಬರೆಯುತ್ತಾರೆ–

ಪದದ ಒದೆತಕೆ ಸ್ವರವು ಪಲ್ಲವಿಸಿ ಮೈದುಂಬಿ
ಹೃದಯ ಮಧ್ಯದಿ ಕವಿತೆ ಬಿರಿದು ನಿಲಲಿ.
(ಭಾವಲತೆ)

ಕವಿತೆಯ ಅಕಾರ, ಅದರ ಚೆಲುವು, ಅದರ ಪ್ರಭಾವ ಉದ್ದೇಶ ಇತ್ಯಾದಿಗಳ ಕುರಿತಂತೆ ಇನ್ನೂ ಕೆಲ ಕವಿತೆಗಳನ್ನ ಅವರು ಕೊಡುತ್ತಾರೆ. ಇನ್ನೊಂದು ಕಡೆಯಲ್ಲಿ ಈ ಸೃಷ್ಟಿಯ ಮೂಲಾಧಾರವಾದ, ವಿಶ್ವದ ಆದಿ ಮಾತಾ ಪಿತರಾದ ಶಿವ ಗಿರಿಜೆಯರನ್ನ ಇರಿಸಿ ಕೊಂಡು ಅವರು ಹೇಳುತ್ತಾರೆ–

ಚಲಿತ ಮತಿಯಲಿ ಗಿರಿಜೆ ಚಲನ ಮೂಲದಿ ಶಿವನು
ಕಾಲತಾಳಕೆ ನಟಿಸಿ ನಲಿಯುತಿರೆ ಸತತ
ಫಲಿತ ಸೃಷ್ಟಿಯ ಲಾಸ್ಯದಾನಂದ ಸಂಚಯಿಸಿ
ಸೊಲ್ಲು ಸೊಲ್ಲಲಿ ಕಲೆತು ನಿಲ್ಲುವುದು ಕವಿತೆ

(ಕವಿತೆ)

ಇಷ್ಟೇ ಅಲ್ಲ ಸಂಕಲನದ ಇನ್ನೂ ಕೆಲ ಕವನಗಳು ಕವಿತೆಯ ಗುಣ ಲಕ್ಷಣಗಳನ್ನ, ಅದರ ಭಾಷಾ ಶ್ರೀಮಂತಿಕೆಯನ್ನ, ಕಾವ್ಯ ಕವಿಗೆ ಓದುಗನಿಗೆ ನೀಡುವ ಸಂಸ್ಕಾರವನ್ನ ತಿಳಿಸಿ ಕೊಡುತ್ತವೆ. ಜೊತೆಗೆ ಕನ್ನಡ ನಾಡನ್ನ ಕುರಿತು ಹೇಳಲಾದ ಕೆಲ ಕವಿತೆಗಳು ಮತ್ತೆ ಭಾಷೆಯ ಬಗ್ಗೆ ಅವೇ ಮಾತುಗಳನ್ನ ಹೇಳುವುದನ್ನ ನಾವು ಕೇಳಿಸಿ ಕೊಳ್ಳುತ್ತೇವೆ.

ಭಾಷಾ ಪ್ರೇಮ, ನಾಡ ಪ್ರೇಮ ಇವುಗಳನ್ನ ಮೀರಿ ನಂಜುಂಡ ನಾಡಿನ ಚೆಲುವನ್ನ, ಸೊಬಗನ್ನ ತಿಳಿಸಿ ಕೊಡುವ ಕೆಲಸ ಮಾಡಿದ್ದಾರೆ. ಕನ್ನಡದ ಕವಿ ಮಾಡಲೇ ಬೇಕಾದ ಕೆಲಸ ಇದು ಎಂದು ನಾನು ತಿಳಿದಿದ್ದೇನೆ. ಈ ಮಣ್ಣಿನ ಗುಣವನ್ನ ಕುರಿತಂತೆ ನಮ್ಮ ಕವಿಗಳು ಹಾಡದಿದ್ದರೆ ನಮ್ಮ ಜನ ಈ ನಾಡನ್ನ ಹೆಮ್ಮೆ, ಅಭಿಮಾನ, ಗೌರವದಿಂದ ನೋಡುವುದೇ ಇಲ್ಲ. ಈ ನಾಡ ಪ್ರೇಮವನ್ನ ಓದುಗರಲ್ಲಿ ಪ್ರಚೋದಿಸಲು ನಂಜುಂಡ ಕೂಡ ತಮ್ಮ ಕವಿತೆಗಳ ಮೂಲಕ ಪ್ರಯತ್ನಿಸಿದ್ದಾರೆ.

ಕವಿ ಇಲ್ಲಿಗೇನೆ ನಿಲ್ಲುವುದಿಲ್ಲ. ಆತ ಬದುಕಿಗೆ ಸಂಬಂಧಪಟ್ಟ ಎಲ್ಲವನ್ನ ಪರಿಶೀಲಿಸುತ್ತ ಹೋಗುತ್ತಾನೆ. ಇಂತಹಾ ಪರಿಶೀಲನೆಗೆ ಒಳಗಾದ ಪ್ರತಿಯೊಂದರ ಕುರಿತೂ ಆತ ಮಾತನಾಡುತ್ತಾನೆ. ಅದು ಮದನ, ಮಾಧವ, ಚಂದಮಾಮ, ಹರಿ, ರಾಮ, ಕಾಗೆ, ಬನ, ಮನಸ್ಸಿಗೊಂದು ಮಾತು, ಸೂರ್ಯೋದಯ, ಹಕ್ಕಿ, ಮಳೆನಾಡು, ಹೀಗೆ ಹಲವು ವಿಷಯಗಳ ಕುರಿತು ಅವರ ಬರೆಯುತ್ತ ಹೋಗುತ್ತಾರೆ. ಹೀಗೆ ಬರೆಯುವಾಗ ಆ ವಸ್ತುವಿನ ಕುರಿತಂತೆ ಹೊಸ ನೋಟವನ್ನ, ಹೊಸ ದೃಷ್ಟಿಯನ್ನ ನೀಡುತ್ತಾರೆ.

"ಒಕ್ಕಲಾಟ" ಅನ್ನುವ ಕವಿತೆ ನಮ್ಮ ರೈತರ ಬದುಕನ್ನ ಚಿತ್ರಿಸುತ್ತದೆ. ಬಿತ್ತುವುದು ಬೆಳೆಯುವುದು ಪ್ರಕೃತಿಯ ಒಂದು ಮಹಾ ಅದ್ಭುತ. ಹಕ್ಕಿಯ ಹೊಟ್ಟೆಯಲ್ಲಿ ಸೇರಿ ಕೊಂಡ ಒಂದು ಬೀಜ ನೆಲಕುದುರಿ ಮರವಾಗುವುದು, ಅಕ್ಕಿ ತೊಳೆದ ಕಲಗಚ್ಚನ್ನ ಕುಡಿದ ಹಸು ಶುಧ್ಧ ಹಾಲನ್ನ ಕೊಡುವುದು, ಒಕ್ಕಲಿಗ ತಾನುತ್ತ ಧಾನ್ಯಗಳಿಂದ ತನ್ನ ಬದುಕನ್ನ ಕಟ್ಟಿ ಕೊಳ್ಳುವುದು, ಹಕ್ಕಿಗಳು ಕೊಕ್ಕಿನಲಿ ಮರಿಗಳಿಗೆ ಕಾಳು ನೀಡುವ ಪರಿ ಇದೆಲ್ಲವನ್ನ ಈ ಕವಿತೆಯ **16** ಸಾಲುಗಳಲ್ಲಿ ವರ್ಣಿಸುತ್ತಾನೆ ಕವಿ.

"ನಾನು ಹಾರುವ ಹಕ್ಕಿ" ಇಂತಹದ್ದೇ ಇನ್ನೊಂದು ಸುಂದರ ಕವಿತೆ. ಬಾನಲ್ಲಿ ಹಾರುವ ಈ ಹಕ್ಕಿ ತನ್ನ ಕುಡಿಯೊಂದು ಹೊರಬರಲೆಂದು ಕಾದಾಗ ಒಂದು ಮರವನ್ನ ಆಯ್ಕೆ ಮಾಡಿ ಕೊಳ್ಳುತ್ತದೆ. ಹಕ್ಕಿಯೊಂದು ಹೇಗೆ ಪರಿಸರವನ್ನ ಬೆಳೆಸುತ್ತದೆ ಎಂಬುದಕ್ಕೆ ಈ ಕವಿತೆ ಒಂದು ಸುಂದರ ಉದಾಹರಣೆ. ಪ್ರಕೃತಿಯಲ್ಲಿ ಹಕ್ಕಿಗಳು ತಮಗೆ ಬೇಕಾದ ಹಣ್ಣು ಹಂಪಲುಗಳನ್ನ ತಾವೇ ಹೇಗೆ ಬೆಳೆಸಿ ಕೊಳ್ಳುತ್ತವೆ ಅನ್ನುವುದಕ್ಕೆ
ಸುಂದರ ವಿವರಣೆ ಇಲ್ಲಿದೆ.

ಹಿತ್ತಲಿನ ಹಣ್ಣುಗಳ ಹಕ್ಕಿಗಳು ತಿಂದುಗುಳಿ
ಬಿತ್ತುತಿರೆ ಬೀಜಗಳ ಹರಡುವುದು ಹಸಿರು
ಸುತ್ತಮುತ್ತಣ ಬನದ ಚೆಲುವು ಚಿಗುರುತಲಿರಲು
ಮತ್ತೆ ಹರಿವುದು ಎನ್ನ ಬಸಿರಿನಲಿ ಉಸಿರು

ಕವಿ ನಂಜುಂಡ ನಮ್ಮ ಹಳೆಯ ಕವಿಗಳ ಹಾಗೆ ಪ್ರಕೃತಿಯ ಆರಾಧಕ. ಅವರ "ಸಲಹಲಮ್ಮ ಬನಗಳು, ಆಸೆ, ಮಳೆ, ಭಾವ ವರ್ಣ, ಯಜ್ಞ, ಸಹಜ, ಸೂರ್ಯೋದಯ, ಧ್ವನಿ, ಸೃಷ್ಟಿ=ಸ್ಥಿತಿ=ಲಯ, ತರು ದೇವತೆ, ಹಲಸಿನ ಸಂತೆ, ಮಳೆ ನಾಡು, ಬೇಲಿಯೇ ಮಾತಾಡು, ಮೊದಲಾದ ಕವಿತೆಗಳಲ್ಲಿ ಪ್ರಕೃತಿ ತನ್ನೆಲ್ಲ ವೈಭವದಿಂದ ವಿಜೃಂಭಿಸುತ್ತದೆ. ಕೆಲಬಾರಿ ಬಂದ ಭಾವಗಳೇ ಬಂದು ಓದುವಿಕೆಯನ್ನ ಕಾಡುವುದುಂಟು. ತಲೆಹಾಕಿದ ವರ್ಣನೆಗಳೇ ತಲೆಹಾಕುವುದೂ ಉಂಟು. ಆದರೆ ಪರಿಸರ ಪ್ರೇಮಿಗಳಿಗೆ ಈ ಕವಿತೆಗಳು ಸಂತಸ ನೀಡುತ್ತವೆ. ಆದರೆ ಕವಿಯ ಪ್ರಕೃತಿ ಪ್ರೇಮ ಎಂಥಹದು ಎಂದರೆ "ತೆಳ್ಳಗಾಗಲೆನ್ನ ಕವಿತೆ" ಎಂದು ಬರೆಯ ಹೊರಡುವ ಕವಿ ಅಲ್ಲಿ ಕೂಡ

"ಮೆಲ್ಲ ಮೆಲ್ಲ ಪಲ್ಲವಿಸಲು
ಗೆಲ್ಲನೊಡೆಯಲಿ;
ಕಲ್ಲ ಮೇಲೆ ಚರಣವಿರಿಪ
ಮೊಲ್ಲೆಯಾಗಲಿ"

ಎಂದು ಪ್ರಕೃತಿಗೇನೆ ತಿರುಗಿ ಬರುತ್ತಾರೆ.

ಪ್ರಕೃತಿಯ ಸೌಂದರ್ಯ, ಶ್ರೀಮಂತಿಕೆ, ಇತ್ಯಾದಿಗಳ ನಡುವೆ ಬದುಕಿನ ಕೆಲ ಸತ್ಯಗಳನ್ನ ಕುರಿತುಕವಿ ಬರೆಯುತ್ತಾರೆ. "ಎಲ್ಲ ಬೇಕು ಎಂಬುದೇಕೆ ಬೇಲಿ ಹಾಕು ಮನಸಿಗೆ". ಎಂಬ ಕವಿತೆ ಮನಷ್ಯನ ಸ್ವಾರ್ಥ ಪರತೆಯನ್ನ, "ಹೊಸತನ" ಅನ್ನುವ ಕವಿತೆ ಮನುಷ್ಯನ ಬದುಕಿನಲ್ಲಿ ಹೊಸತನದ ಆವಶ್ಯಕತೆಯನ್ನು, "ಒಕ್ಕಲಾಟ" ಹಾಡು, ಮಾತು ಹೇಗೆ ಜನ್ಮ ತಾಳುತ್ತವೆ ಅನ್ನುವ ಸುಂದರ ಚಿತ್ರಣವಿದೆ. "ನಾನು ಹಾರು ಹಕ್ಕಿ" ನಮ್ಮ ಭಾವನೆಗಳ ಸೌಂದರ್ಯವನ್ನ ಚಿತ್ರಿಸಿದರೆ, "ಪದ" ಅನ್ನುವ ಕವಿತೆ ಪದದ ಶ್ರೇಷ್ಠತೆಯನ್ನೇ ನಮ್ಮ ಮುಂದೆ ಹೀಗೆ ಇಡುತ್ತದೆ_

ಭಾವದೊಳ ಬಣ್ಣ ಒಳಗಣ್ಣ ತುಂಬಿ
ಶಿವಬಿಂಬವಾಗಿ ನಿಲಲಿ
ಸಾವಿಲ್ಲದಂಥ ಪದವಾಗಿ ನಿಂತು
ಸಮರಸವ ತುಂಬುತಿರಲಿ

"ಆಶೆ" ಅನ್ನುವ ಕವಿತೆ "ಬಾಲ್ಯ ಕಳೆದು ಯೌವನ ಬಂದು ಮುಪ್ಪು ಬಂದು ನಿಂತಾಗಲೂ ಮನಸ್ಸಿನ ಆಶಾ ಗೋಪುರ ಹೇಗೆ ಎತ್ತರಕ್ಕೆ ಏರುತ್ತಲೇ ಇರುತ್ತದೆ ಎಂಬುದನ್ನ ಚಿತ್ರಿಸುತ್ತದೆ.

ಹೀಗೆ ಮನಸ್ಸಿಗೆ ಬಂದ ವಿಚಾರಗಳನ್ನ ಕವಿತೆಯನ್ನಾಗಿಸುವ ಪ್ರತಿಭೆ ಇವರಲ್ಲಿದೆ. ಈ ಸಂಕಲನದ ಕೆಲ ಕವಿತೆಗಳನ್ನ ಬಿಟ್ಟರೂ ಅಡ್ಡಿಯಿಲ್ಲ ಎಂದು ನನಗೆ ಅನಿಸುತ್ತದೆ. ಕಾವ್ಯದ ಲಯ, ಬಂಧ, ಸೊಬಗು ಎಲ್ಲ ಕವಿತೆಗಳಲ್ಲೂ ಎದ್ದು ಕಾಣುತ್ತದೆ. ಈ ದೃಷ್ಟಿಯಲ್ಲಿ ಇಲ್ಲಿಯ ಕವಿತೆಗಳು ಮನಸ್ಸನ್ನ ಆಕರ್ಷಿಸುತ್ತವೆ. ಮನಸ್ಸಿಗೆ ಮುದ ನೀಡುತ್ತವೆ, ಕವಿ ವಸ್ತುವಿನ ಪುನರುಕ್ತಿಯ ಕುರಿತು ಚಿಂತಿಸುವ ಆವಶ್ಯಕತೆ ಇದೆ. ಈ ಮಾತು, ಈ ಶಬ್ದ, ಈ ರೂಪಕ ಹಿಂದೆ ಬಂದಿತ್ತಲ್ಲವೆ ಎಂದು ಓದುಗ ಗೊಂದಲದಲ್ಲಿ ಬೀಳುವಂತೆ ಆಗಬಾರದು. ಈ ಒಂದು ಎಚ್ಚರಿಕೆ ಇರಿಸಿ ಕೊಂಡರೆ ಈ ಕವಿ ಓದುಗರ ದೃಷ್ಟಿಯಲ್ಲಿ ಖಂಡಿತ ಉತ್ತಮ ಕವಿ.

ಇವರಿಗೆ ಒಳಿತಾಗಲಿ.

ಸಾಗರ: 577 401 —ಡಾ. ನಾ. ಡಿಸೋಜ.

## ಕವಿಯ ಮಾತು

ವಿಶಾಲ ಬಾನ ಬಯಲಿನ ಹರಹಿನಲಿ ಪಸರಿಸಿಹ ದನಿಗೆ ದನಿಗೂಡಿಸುವ ಯತ್ನವೇ ನನ್ನ ಈ "ಬಾನ್ದನಿ" ಎಂಬ ಕವಿತೆಗಳ ಸಂಕಲನ. ಮಾತು ಮತ್ತು ಮತಿಗಳಿಗೆ ನಿಲುಕದ ಸೃಷ್ಟಿಯ ಅಮೂರ್ತವಾದ ದನಿಯೊಂದು ಬಹುವಾಗಿ ವಿವಿಧ ವಿನ್ಯಾಸದಲಿ ಪ್ರಾಣಿ, ಪಕ್ಷಿ, ಗಿಡ, ಮರ, ಹೊನಲು, ಕಡಲು ಹೀಗೆ ಎಲ್ಲದರಲ್ಲೂ ನಿಯತದಲಿ ಬಂಧಿಯಾಗಿ ಭಾವಕ್ಕೆ ನಿಲುಕಿದಂತೆ ಭಾಸವಾದಾಗ ಎದೆಯೊಳಗೆ ಕುಣಿದು ಕುಪ್ಪಳಿಸುವ ಚಿತ್ರಗಳಿಗೆ ಅಕ್ಷರಗಳ ರೂಪವನ್ನು ಕೊಡುವ ಪ್ರಯತ್ನದಲ್ಲಿ ಬಂದವುಗಳೇ ಈ ಕವಿತೆಗಳು.

ಭಾವೋದ್ರೇಕದಲ್ಲಿ ಬರೆಯುವಾಗ ಪದಗಳಿಗೆ ಯಥಾಮತಿ ಪೂರೈಸಿದ ಅರ್ಥಗಳು ಅರ್ಥಾಂತರವಾಗಿ ಓದುಗರನ್ನು ಮುಟ್ಟುವ ಸಾಧ್ಯತೆಗಳಿರುವುದನ್ನು ಇಲ್ಲಿ ಅಲ್ಲಗಳೆಯುವಂತಿಲ್ಲ. ಆದರೂ ಎಲ್ಲವೂ ಓದುಗರ ಕೈಸೇರಿ ಅವರಿಗನಿಸಿದಂತೆ ಅರ್ಥೈಸಿಕೊಂಡರೆ ಒಂದರ್ಥವು ಹಲವಾಗಿ ಅವುಗಳ ಮೌಲ್ಯವರ್ಧನೆಯಾಗುವುದಲ್ಲಿಯೇ ಇದರ ಸಾರ್ಥಕತೆಯಡಗಿದೆಯೆಂದು ನನ್ನ ಅನಿಸಿಕೆ.

ಮಿತ್ರರ ಮೆಚ್ಚುಗೆಗಳನ್ನು ಪಡೆಯುವ ಸಲುವಾಗಿ ಇವೆಲ್ಲವೂ ಬರೆದ ಮರು ಕ್ಷಣವೇ ಫೇಸ್ ಬುಕ್‌ನ ಗೋಡೆಬರಹಗಳಾಗಿ ದಾಖಲಾಗಿವೆ. ಅದಕ್ಕೂ ಮೊದಲು ನನ್ನವಳ ಕಣ್ಣಲ್ಲಿ ಕಣ್ಣಿಟ್ಟು ಓದಿದಾಗ ಹೊರಟ ಹೊಂಗಿರಣಗಳನ್ನು ಎದೆಯೊಳಗೆ ಹುದುಗಿಸಿಟ್ಟುಕೊಂಡಿದ್ದೇನೆ.

ಬಗೆಬಗೆಯ ಭಾವಗಳನ್ನು ಬಂಧಿಗೊಳಿಸಲು ಯತ್ನಿಸುವ ಪದಗುಚ್ಛಗಳನ್ನು ಪುಸ್ತಕರೂಪಕ್ಕಿಳಿಸುವ ಪ್ರಯತ್ನವೇ ನನ್ನೀ ಸಂಕಲನದ ಉದ್ದೇಶ. ಇಲ್ಲಿರುವುಗಳನ್ನು ಓದಿದಾಗ ಮನಸ್ಸಿಗೆ ಹಿತವಾದಂತೆ ಅನಿಸಿದರೆ ಅದುವೇ ಪ್ರಯತ್ನಕ್ಕೆ ತಕ್ಕ ಫಲವೆಂದು ಭಾವಿಸುತ್ತೇನೆ.

ಕನ್ನಡ ನಾಡು ಕಂಡ ಸರಳ ಸಜ್ಜನಿಕೆಯ ಸಾಕಾರ, ಮೇರುಸಾಹಿತಿ ನಗುಮೊಗದ ನಾ ಡಿಸೋಜರವರು ಮುನ್ನುಡಿಯನ್ನು ಬರೆದು ಆಶೀರ್ವದಿಸಿರುವುದು ನನ್ನ ಸುದೈವ. ಅವರಿಗೆ ಪ್ರಣಾಮಗಳು. ಅಂದವಾದ ಛಾಯಾಚಿತ್ರವನ್ನು ತೆಗೆದು ಮುಖಪುಟಕ್ಕೆ ಹೊಂದಿಸಿಕೊಟ್ಟ ಮಿತ್ರ ಸಿಂಧೂರ್ ಭಟ್, ಶಿರಸಿ ಹಾಗೂ ಮುದ್ದಾದ ಅಕ್ಷರಗಳನ್ನು ಮುದ್ರಿಸಿಕೊಟ್ಟ ಸಾಗರದ ಅಕ್ಷರ ಆಫ್ ಸೆಟ್ ಪ್ರಿಂಟರ್ಸ್‌ನ ನಾಗರಾಜರವರಿಗೆ ಹಾಗೂ ಬರೆಯಲು ಸದಾ ಪ್ರೋತ್ಸಾಹಿಸುತ್ತಿರುವ ಫೇಸ್ ಬುಕ್‌ನ ಎಲ್ಲಾ ಗೆಳೆಯರಿಗೂ, ಕಾವ್ಯಾರಾಮ ವಾಟ್ಸಾಪ್ ಗ್ರೂಪ್‌ನ ಸದಸ್ಯರೆಲ್ಲರಿಗೂ ಕೃತಜ್ಞತೆಗಳನ್ನು ಅರ್ಪಿಸುತ್ತಾ ನನ್ನಿಂದ ಹೊರಟ ಅಕ್ಷರಗಳನ್ನು ಓದುಗರ ಅಪಾರ ಅರ್ಥಪ್ರವಾಹದಲ್ಲಿ ಪುಸ್ತಕವೆಂಬ ನಾವೆಯೊಳಗಿರಿಸಿ ತೇಲಿಬಿಡುತ್ತಿದ್ದೇನೆ.

– ಡಿ.ನಂಜುಂಡ
ಬೊಮ್ಲಾಪುರ
ಕೊಪ್ಪ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ

## ಪರಿವಿಡಿ

## 1. ಹೊಸಗವಿತೆ

ಕಾದಿರುವೆ ನಾನಿಂದು ಬಾಗಿಲಿನ ಕದ ತೆರೆದು
ಮಧುರ ಭಾವವು ಬಳುಕಿ ಬಾಗಲೆಂದು
ಹೃದಯ ಮಿಡಿತದ ಗತಿಗೆ ಕುಣಿಕುಣಿದು ನಲಿದಾಡಿ
ಮುದ್ದಾದ ಪದವೊಂದು ನುಸುಳಲೆಂದು

ಹಳೆಯ ನೆನಪಿನ ಸುರುಳಿ ಚಿತ್ತದಲಿ ತಾ ಬಿಚ್ಚಿ
ಸುಳಿವು ನೀಡಿದೆ ಒಳಗೆ ಬರುವೆನೆಂದು
ಮಳೆಯ ಹನಿಗಳು ಸುರಿದು ಇಳೆಯಾಳಕಿಳಿವಂತೆ
ಗಳದೊಳುದುರಿವೆ ಸ್ಮೃತಿಯ ಹನಿಗಳಿಂದು

ಉಸಿರ ಕಣದಲಿ ಬೆರೆತು ರಸವಾಗಿ ಜಿನುಜಿನುಗಿ
ಸೋಸಿ ನಿಲ್ಲುತ ಸ್ವರವು ಬಾಗಿ ಬರಲಿ
ಬಸಿರಿನಲಿ ಅಣು ಮೊಳೆತು ತಾ ಜೀವ ತಳೆವಂತೆ
ಹೊಸಗವಿತೆ ಕೂಸಾಗಿ ಎದೆಗೆ ಬರಲಿ

**27/7/2013**

## 2. ಭಾವಲತೆ

ಬಾಗಿ ಬಾ ಎನ್ನೆದೆಗೆ ಬಳುಕಿನಾ ಭಾವಲತೆ!
ಉಗುರು ಸೋಂಕದ ಚಿಗುರ ಗೆಲ್ಲಿನಂತೆ
ಚಿಗರೆಯೋಟದ ನಿನ್ನ ಮೈಮೇಲೆ ಅಲ್ಲಲ್ಲಿ
ಮುಗಿಲ ಹೂವ್ಗಳು ನಿಂತು ಘಮಿಸುವಂತೆ

ಸಗ್ಗದಾ ಸೊಗವೆಲ್ಲ ಒಗ್ಗೂಡಿ ಓಡೋಡಿ
ಮೊಗ್ಗೊಳಗೆ ಅಣುವಾಗಿ ಬೆರೆತು ಬರಲಿ
ಹಿಗ್ಗಿ ಅರಳುತ ಮನಸು ತೇಲಾಡಿ ಹಗುರಾಗಿ
ಮೊಗದಲ್ಲಿ ಹೂ ನಗೆಯು ಮಾಗಿ ಬರಲಿ

ಮೊದಲ ನಡಿಗೆಯ ನಡೆದು ಚೆಲುವಿನಲಿ ಚೆಲ್ಲಾಡಿ
ಮೆದುವಾದ ಚರಣದಲಿ ಎದೆಗೊದೆಯಲಿ
ಪದದ ಒದೆತಕೆ ಸ್ವರವು ಪಲ್ಲವಿಸಿ ಮೈದುಂಬಿ
ಹೃದಯಮಧ್ಯದಿ ಕವಿತೆ ಬಿರಿದು ನಿಲಲಿ

**30/7/2013**

## 3. ಒಲವು!

ಒಲವೆ! ನೀನು ಜಗದ ಮಾತೆ
ಜಲಧಿಯಂತೆ ವ್ಯಾಪಕ
ಅಲೆಯ ಮೇಲೆ ಚಲಿಪ ನಾನು
ತೇಲುತಿರುವ ನಾವಿಕ

ಮನದ ಹೊನಲ ಹರಿವು ಮುಗಿದು
ಕಾಣದಿರಲು ಅದರ ಕುರುಹು
ಕಳೆವೆ ನಾನು ಎಂಬ ಸುಳಿವ
ಒಳಗೆ ಸೇರಿ ನಿನ್ನ ಮಡಿಲ

ತೀರವಿರದ ಪ್ರೀತಿಕಡಲ
ದೂರದಳತೆ ನಿಲುಕದಿರಲು
ಆಳಕಿಳಿದು ತಳವು ಸಿಗದೆ
ತೇಲುತಿಹುದು ಹಗುರ ಭಾವ

**16/8/2013**

## 4. ಮುದ್ದು ಚಿನ್ನ!

ನನ್ನ ಮುದ್ದು ಚಿನ್ನ ನೀನು!
ಸನಿಹವಾದೆ ಹೃದಯಕೆ
ಒಲವಿನೊಲೆಯಲುರಿದು ಹದದಿ
ಹೊಳಪನೆರೆದೆ ಬಾಳಿಗೆ

ಉಸಿರಕಣದಿ ಒಸರಿಸಿರುವೆ
ಹೊಸಹರುಷಗಳೊರತೆಯ
ಬಿಸಿಯುಸಿರಲಿ ಬೆಸುಗೆಗೊಂಡು
ಕುಸುರಿಯಾಗಿ ಬಂದಯ?

ಮೈಮನಗಳನಲಂಕರಿಸಿ
ಅಮಿತಸುಖವ ಸುರಿಸಿದೆ
ಧಮನಿಗಳಲಿ ಧುಮ್ಮಿಕ್ಕುತ
ಪ್ರೇಮನದಿಯ ಹರಿಸಿದೆ

ಆಸೆಯೆಲ್ಲ ಮೂಸೆಯಾಗೆ
ಪಿಸುಮಾತುಗಳೆರಕಕೆ
ರಸವಿದ್ಯೆಯ ಪರಿಪಾಕದಿ
ಒಸಗೆಯಾದೆ ಬಾಳಿಗೆ

**10/9/2013**

## 4. ಎಲ್ಲ ಬೇಕು ಎಂಬುದೇಕೆ?

ಎಲ್ಲ ಬೇಕು ಎಂಬುದೇಕೆ?
ಬೇಲಿ ಹಾಕು ಮನಸಿಗೆ
ನನ್ನದೆಂಬ ಮುಳ್ಳು ಗಡಿಯ
ಕಿತ್ತು ಎಸೆದು ಬಯಲಿಗೆ

ಎಲ್ಲ ಗೊತ್ತು ಎಂಬ ಭಾವ
ಅಳಿಸಿ ಹಾಕು ಅರಿವಲಿ
ನಾನು ಎಂಬ ಬೇಡಿ ಕಳಚಿ
ಮುಕ್ತಿ ಹೊಂದು ಕ್ಷಣದಲಿ

ಬಯಕೆಗಳನು ಹೊತ್ತು ಹೆತ್ತು
ಬೆವರಬೇಡ ಎದೆಯಲಿ
ಸಿರಿಯ ತಂದು ನೇಯ್ದೆ ನೇಯ್ದು
ಸಿಲುಕಬೇಡ ಬಲೆಯಲಿ

ಒಳಗೆ ಕುದಿದು ಬೇಯಬೇಡ
ಕಳೆವುದೆಂಬ ದುಗುಡಕೆ
ಬೆಂಕಿಯನ್ನೆ ಭಸ್ಮ ಮಾಡು
ಬಿಂಕವೇಕೆ ಬಾಳಿಗೆ?

ಭಾವ ತುಂಬಿ ಬಾಗಿ ನಮಿಸಿ
ದೇವನಿಯತ ಸೃಷ್ಟಿಗೆ
ಎಲ್ಲೆ ಮೀರಿ ಹಗುರವಾಗಿ
ಮೇಲಕೇರು ಮುಗಿಲಿಗೆ

**15/9/2013**

## 6. ಒಲವಗೀತೆ!

ನಲ್ಲೆ! ನಿನ್ನೊಡನಾಟ ಚೆಲುವು ತಂದಿರೆ ಮೊಗಕೆ
ಬಾಳೆಲ್ಲ ಸರಿಗಮದ ಸುಗಮಗೀತೆ
ಕಲ್ಲೆದೆಯ ನೆಲದಲ್ಲಿ ಒಲವನಿಂಗಿಸೆ ನೀನು
ಸಲ್ಲಾಪದಾ ಪಲುಕು ಚಿಲುಮೆಯಂತೆ

ಮಳೆಯ ಹನಿಗಳನುಂಡು ಜಲವೊಡೆದ ಬುವಿಯಂತೆ
ಹೊಳೆಯ ಹರಿಸಿರೆ ಹೃದಯವೊಲವ ಕುಡಿದು
ಗೆಲುವಿನಾ ಗೆಲ್ಲೊಡೆದ ಬಳ್ಳಿಗಳು ಬಳಸುತಿವೆ
ನಲ್ಲೆ! ನಿನ್ನಯ ಸುತ್ತ ಚಿಗುರನೊಡೆದು

ಬಾಳಿನೊಸಗೆಯ ಭಾವವೆದೆಯೊಳಗೆ ಪಲ್ಲವಿಸಿ
ಸೊಲ್ಲಾಗಿ ಬಳುಕುತಿದೆ ತನುಮನದಲಿ
ನಲ್ಲೆ! ನಿನ್ನಯ ನಗುವು ಹಾಲಿನಾ ನೊರೆತೆರದಿ
ಚೆಲ್ಲುತಿರೆ ಉಕ್ಕುತಲಿ ಬಿಸಿಯುಸಿರಲಿ

**26/09/2013**

## 7. ಕನ್ನಡಾಂಬೆಯು ಬರಲಿ!

ಆನನದಿ ಕುಣಿದಾಡು ಮೌನಘನಚೇತನವೆ!
ಪ್ರಾಣದೊಳು ಪದವಿರಿಸಿ ಮನವ ಸಂಸ್ಕರಿಸಿ
ಅಣುರೇಣುತೃಣಕಾಷ್ಠವನುರಣಿಸಿ ಬಾ ಎದೆಗೆ
ಝಣಝಣಿಪ ಓಂಕಾರಬೀಜವಂಕುರಿಸಿ

ಧ್ಯಾನಾಗ್ನಿಕುಂಡದಲಿ ಜ್ಞಾನಾಗ್ನಿ ಪ್ರಜ್ವಲಿಸಿ
ಅನವದ್ಯ ಭಾವಗಳು ಹವಿಯಾಗಿ ಸುಡಲಿ
ಮೌನಭಾಂಡದ ಒಳಗೆ ಚೆನ್ನುಡಿಯ ರಸ ಪಿಡಿದು
ಕನ್ನಡಾಂಬೆಯು ಎದ್ದು ನಾಲಗೆಗೆ ಬರಲಿ

ಹೃದಯ ಕಮಲದ ಒಳಗೆ ಮಧುರಹನಿಗಳು ತುಂಬಿ
ಪದಗರ್ಭದೊಳಹೊಕ್ಕು ಫಲವಾಗಿ ಬರಲಿ
ಮೊದಲ ನುಡಿಗಳ ತೊದಲು ಮೃದುಲತದ್ಭವವಾಗಿ
ವದನವರಳಿಸಿ ಮುದದಿ ಹೊರಹೊಮ್ಮುತಿರಲಿ

**17/10/2013**

## 8. ಸವತಿಮತ್ಸರ

ವನಶಿವೆಯು ತಬ್ಬಿಹಳು ತನ್ನಿನಿಯ ಗಿರಿಶಿವನ
ಹನಿಕರಿಪ ಗಂಗೆಯನು ದಬ್ಬಿ ದಬ್ಬಿ
ಕಣಿವೆಯಾಳಕೆ ಬಿದ್ದ ಹೊನಲ ರಾಣಿಯು ಎದ್ದು
ಮೌನಶರಧಿಯ ಕಡೆಗೆ ಓಡುತಿಹಳು

ಕಡಲ ಒಡೆಯನ ಕೂಡಿ ಒಡಲ ಕಿಡಿಯನು ಕಕ್ಕಿ
ಮೋಡದಲಿ ತಾ ಬೆರೆತು ಗುಡುಗಿ ನಿಂದು
ಪಡುವಣದ ಬಾನಿನಲಿ ಸಿಡುಕುತಲಿ ಕಪ್ಪೇರಿ
ಬಡಬಡನೆ ಸುರಿಮಳೆಯನುಗುಳುತಿಹಳು

ಬಿರುಗಾಳಿಯೊಡಗೂಡಿ ತರುಬಾಹುಗಳ ಮುರಿದು
ಎರಚಿಹಳು ಬಿರುನೀರ ಸವತಿಯೆಡೆಗೆ
ಬೇರುಗಳು ಅಲುಗುತಿರೆ ಕರವೆತ್ತಿ ಶಂಕರಿಯು
ಶರಣು ತಾ ಶರಣೆಂದು ಕೂಗುತಿಹಳು

ದೀನತೆಯ ದನಿ ಕೇಳಿ ಕರ ಪಿಡಿದು ಹನಿಯಿರಿಸಿ
ಹರಸಿದಳು ಪ್ರೀತಿಯಲಿ ಬನಸವತಿಯ
ಪರಶಿವನ ಸತಿಯಾಗು ಗಿರಿಶಿರದಿ ನಾನಿರುವೆ
ಮರೆಯೋಣ ಮತ್ಸರವ ಎಂದಳವಳು

ಶಿವೆಗಂಗೆಯರ ನಡುವೆ ಸವತಿಯಂತರವಳಿಯೆ
ಬುವಿಯೆಲ್ಲ ತಂಪಾಗಿ ನಗುತಲಿಹುದು
ಅವಳಿರದೆ ಇವಳಿಲ್ಲ ಇವಳಿರದೆ ಅವಳಿಲ್ಲ
ಶಿವನೊಡನೆ ಇಬ್ಬರೂ ಬಾಳುತಿಹರು

**22/10/2013**

## 9. ಅಂಟದಿರು ಮನವೆ!

ನಾನೆಂಬ ಭಾರವನು ಕೆಳಗಿಳಿಸು ಎಲೆ ಮನವೆ!
ಸಂತತವು ಅರಳುತಲಿ ಹಗುರವಾಗು
ಎದೆಯೊಳಗ ಸುರಿಯುತಿಹ ಭಾವಗಳ ಧಾರೆಯನು
ಬಯಲ ಹರಹಲಿ ಇರಿಸಿ ಲೀನವಾಗು

ತಂದಿಲ್ಲ ಮಕುಟವನು ಬರುವಾಗ ಈ ಜಗಕೆ
ಬಿಡುವಾಗ ನನದೆಂಬ ಚಿಂತೆಯೇಕೆ?
ಹಣ್ಣುಗಳ ಕಳಚುತಿಹ ಮರದಂತೆ ನೀನಾಗು
ಫಲವ ಬಯಸುವ ಕರ್ಮಬಂಧವೇಕೆ?

ಹಲಸಿನಾ ಹಣ್ಣಿನಲಿ ಅಂಟಿರುವ ನೊಣದಂತೆ
ಒದ್ದಾಟ ನಿನಗೇಕೆ ನಂಟಿನೊಳಗೆ?
ತಂದಿದ್ದು ಕಳೆದಿಲ್ಲ ಕಳೆದದ್ದು ನಿನದಲ್ಲ
ಸಿಲುಕದಿರು ಆಸೆಗಳ ಗಂಟಿನೊಳಗೆ

ಚರದಿರವ ನೀ ಮರೆತು ಸ್ಥಿರವಾಗಿ ಹರಿಯುತಲಿ
ಒಂದಾಗು ಜಗದೊಲವ ಬಯಲಿನೊಳಗೆ
ಕಡಲಿನೊಡಲನು ಸೇರಿ ಹೆಸರನ್ನು ತಾ ಕಳೆದ
ಹೊನಲಂತೆ ಬೆರೆತುಬಿಡು ಅರಿವಿನೊಳಗೆ

**03/11/2013**

## 10. ಪದವಿರದ ವ್ಯಥೆ!

ನೀಲ ಬಾನಲಿ ತೇಲಿ ಸಾಗುತಿಹ ನೀರದನೆ!
ಆಲಿಸೆನ್ನಯ ಮಾತ ಹೃದಯಸಖನೆ!
ಚಲಿಸಲಾರೆನು ಏಕೊ ನಿನ್ನಂತೆ ಅರೆ ಕ್ಷಣವು
ಮಳೆಯಾಗಿ ಕೆಳಗಿಳಿದು ಬಾ ಬೇಗನೆ

ಎದೆಯ ಕೊರೆಯುವ ನೋವನರುಹುವೆನು ನಿನ್ನ ಬಳಿ
ನದಿಯ ಜಲದಲಿ ಇರಿಸಿ ಹರಿವಾಗಿಸು
ಮೃದುವಾದ ಜಲಚರಣ ಸ್ಪರ್ಶಭಾಗ್ಯವ ನೀಡಿ
ಪದವಿರದ ವ್ಯಥೆಯೊಂದ ನೀ ನೀಗಿಸು

ಕಣಿವೆಯಾಳಕೆ ನೆಗೆದು ನಗುನಗುತ ನಲಿದಾಡಿ
ಅನುದಿನವು ಬಂಡೆಗಳ ಸುತ್ತಿ ಬಳಸು
ಹೊನಲರಾಣಿಯ ಮೊಗಕೆ ನಾಚಿಕೆಯ ಕೆಂಪಿಡುತ
ಮಣ್ಣ ಕಣಗಳ ಕುಣಿಸಿ ಬಣ್ಣವಿರಿಸು

ಶರಧಿಯಲಿ ಒಂದಾಗಿ ಭಾವವರ್ಣಗಳೆಲ್ಲ
ಹಾರುತಿರಲಾಗಸಕೆ ಹಗುರವಾಗಿ
ಕರಗಿ ಸುರಿಯುತಲಿರಲು ಆಸೆಗಳ ಕಾರ್ಮುಗಿಲು
ಗಿರಿಯಾಗೆ ಉಳಿಯುವೆನು ನಾನೆಂದಿಗೂ

**5/11/2013**

## 11. ದಿವ್ಯಪಕ್ಷಿ

ಕರಿಯ ಸುಂದರ ಕಾಗೆ! ಯಾರಿಲ್ಲ ನಿನ ಹಾಗೆ
ಗುರುವಂತೆ ಅನುದಿನವು ಅರಿವನೆರೆವೆ
ಮರಮರವ ಸಿಂಗರಿಪ ಪರಮಮಿತ್ರರ ಕೂಡಿ
ಹಾರುತಲಿ ಆರವದಿ ಬೆಳಕ ಕರೆವೆ

ಆ ರವಿಯು ಕರಗಿಸಿದ ಪರಿತ್ಯಕ್ತ ವರ್ಣವನು
ಕರುಣೆಯಿಂದಲಿ ಹೀರಿ ನೀ ಧರಿಸುವೆ
ಮರಣ ಹೊಂದಿದ ದೇಹ ನಾರುತಿರೆ ದಾರಿಯಲಿ
ಕರೆದು ಕುಲಬಾಂಧವರ ಸಂಸ್ಕರಿಸುವೆ

ಗುಡಿಯ ಶಿಖರವೆ ಇರಲಿ ಗುಡಿಸಿಲಿನ ಸೂರಿರಲಿ
ಒಡಲೊಳಗೆ ಎರಡೆರಡು ಎಣಿಕೆಯಿಲ್ಲ;
ಅಡಿಯಿಡುತ ಎಲ್ಲೆಲ್ಲು ನೋಡಿ ಸಮದೃಷ್ಟಿಯಲಿ
ಬಡವ ಬಲ್ಲಿದರೆಂಬ ಭೇದ ತೊರೆವೆ

ಕವಿಯುಲಿಗೆ ಕಾವಿಟ್ಟ ದಿವ್ಯಪಕ್ಷಿಯು ನೀನು
ಭವದೊಳಗೆ ನಿನಗಿಂತ ಭವ್ಯರಿಲ್ಲ
ಸಾವನಪ್ಪಿದ ಜನರು ಭಾವರೂಪವ ತಳೆದು
ಅವತರಿಸಿ ನಿನ್ನೊಳಗೆ ನಲುವರೆಲ್ಲ!

**16/11/2013**

## 12. ಒಲವ ಮಲ್ಲಿಗೆ

ಕೇಳು ಬಾ ಓ ಗೆಳೆಯ! ಹಾಡುತಿರೆ ಹೃದಯ
ಏಳು ಬಣ್ಣಗಳೂಡಿ ಬಿಳಿಯಾದ ಬಗೆಯ

ಎಳೆಯ ರವಿಕಿರಣಗಳು ಇಳೆಗಿಳಿದ ನಸುಕಿನಲಿ
ಮೊಲ್ಲೆಹೂಬಳ್ಳಿಯಲಿ ಅರಳುತಿರೆ ಮುಗುಳು
ತಳುಕು ಬಳುಕಿನ ಮೈಯ ಕುಲುಕಿ ಕೊಂಕಿಸಿ ಒಮ್ಮೆ
ಬೇಲಿಗಿಡಗಳ ಬಳಸಿ ಹಬ್ಬುತಿದೆ ಚೆಲುವು

ನೀಲಗಗನದಿ ಹೊಳೆವ ಬೆಳ್ಳಿಚುಕ್ಕೆಯ ಬೆಡಗು
ನಳನಳಿಪ ಹೂಗಳಲಿ ಮೈದುಂಬಿದಂತೆ
ಗೆಲುವು ಚಿಮ್ಮುತ ಚಿಗುರಿ ಗೆಲ್ಲುಗೆಲ್ಲಲಿ ಬಾಗಿ
ನಲಿವಾಗಿ ನಿಂತಂತೆ ತಬ್ಬಿರಲು ತರುವ

ಬಾಳಿನಂಗಳದಲ್ಲಿ ನಲ್ಲೆಯಾ ಮೊಗವರಳಿ
ಒಲವು ತುಂಬಿದ ಹಾಗೆ ಎದೆಯೊಳಗ ಭಾವ
ಕಲ್ಲೆದೆಯ ಹಂದರದಿ ಪಲ್ಲವಿಸಿ ಪ್ರೇಮಲತೆ
ಗಲ್ಲದಾ ಕುಳಿಯೊಳಗೆ ಹೊತ್ತಂತೆ ಹೂವ

**21/11/2013**

## 13. ಕವಿತೆ

ವೀಣೆಯೊಳು ಅನುರಣಿಸಿ ಹರಿವು ಬರಲೆದೆಗೆ
ಕನ್ನಡಾಂಬೆಯ ಚರಣಸಂಚಲಿತ ದನಿಗೆ

ಮನವಿರಿಸಿ ಉಸಿರಿನಲಿ ಲಯವಿರಿಸಿ ಹೃದಯದಲಿ
ಕಣಕಣದ ಕಂಪನಕೆ ಪದಗಳನು ಹೆಣೆದು;
ಮೌನದುದರದ ಒಳಗೆ ಭಾವಬಿಂಬವು ಚಲಿಸಿ
ಜನಿಸುತಿರೆ ಮುದ್ದಾದ ಒಲವಿನಾ ಕವಿತೆ

ಪಂಚಪ್ರಾಣಗಳೆಲ್ಲ ಮಥಿಸಿ ಮಾತಿನ ಮಿತಿಗೆ
ಪಂಚಮಾತ್ರಾಗತಿಯ ರಿಂಗಣಕೆ ಕುಣಿದು;
ಪಂಚಭೂತಗಳೆಲ್ಲ ಹೂಂಕರಿಸಿ ದನಿಯೊಳಗೆ
ಸಂಚರಿಸಿ ಹೊಮ್ಮುತಿರೆ ಚೆಲುವಿನಾ ಕವಿತೆ

ಆನನದ ವಿಕಸನವು ಧ್ಯಾನದಲಿ ತಾ ನಿಂತು
ಜೇನ ಹನಿಗಳು ಜಿನುಗಿ ರಸನದಲಿ ಬೆರೆತು;
ಗಾನಮಯ ಕೋಶದಲಿ ಅಕ್ಷರಗಳಂಕುರಿಸಿ
ಅನವರತ ಚಿಮ್ಮುತಿರೆ ನವರಸದ ಕವಿತೆ

ಚಲಿತ ಮತಿಯಲಿ ಗಿರಿಜೆ ಚಲನಮೂಲದಿ ಶಿವನು
ಕಾಲತಾಳಕೆ ನಟಿಸಿ ನಲಿಯುತಿರೆ ಸತತ;
ಫಲಿತ ಸೃಷ್ಟಿಯ ಲಾಸ್ಯದಾನಂದಸಂಚಯಿಸಿ
ಸೊಲ್ಲು ಸೊಲ್ಲಲಿ ಕಲೆತು ನಿಲ್ಲುವುದು ಕವಿತೆ

**25/11/2013**

## 14. ಕಾನನ

ತ್ರಿಭುವನಸುಂದರ! ಅತಿಶಯಬಂಧುರ!
ನಿತ್ಯಹರಿದ್ವರ್ಣ ಮಂದಿರ
ವನಚರಚಾಲಿತ ತರಗೆಲೆಯಿಂಚರ;
ಸರಸರ ಸ್ವರತರ ಗಾಂಧಾರ
ಶ್ರುತಿಹಿತಮಧುಕರಝೇಂಕಾರ;
ಶಿವಶಂಕರಿಯಾ ಸಂಚಾರ:
ಹಿಮಮಣಿಭೂಷಿತ ಸುಮಸಂಸೇವಿತ
ದೇವಿಯ ಸುಂದರ ಅವತಾರ

ಗಿರಿತಲನದಿಯಲಿ ಝುಳುಝುಳು ನಿಸ್ವನ;
ಜಲಚರಚಲನೆಯ ಸಂವಹನ
ಧಾರಾವೃಷ್ಟಿಯ ತಟತಟ ತಾಳಕೆ
ನವಿಲಿನ ನರ್ತನಸಂಚಲನ
ಧರಣೀಮಂಡಲದುದ್ಯಾನ;
ಆಹಾ! ಸುರಲೋಕಸಮಾನ!
ಅನುದಿನ ನಸುಕಿನ ವನಕವಿಗೋಷ್ಠಿಗೆ
ಪಂಚಮಸ್ವರದಲಿ ಪಿಕಗಾನ

ಕುಸುಮಿತ ಗಿಡಗಳ ಚಿಗುರಲಿ ನವಶರ;
ಪ್ರಸವಿತ ತರುವಿಗೆ ತನುಭಾರ.
ನಾನಾಲತೆಗಳ ಮಂಟಪಮಧ್ಯದಿ
ಪತಂಗಯುಗಲದ ಶೃಂಗಾರ
ರತಿಮನ್ಮಥಮಿಲನೋದ್ಗಾರ;
ಹರ್ಷೋತ್ಸವಕಾರ್ಯಾಗಾರ:
ಪುಲಕಿತ ಭೂರಮೆಯುದರದಿ ಅರ್ಪಿತ

ನವಬೀಜಾಂಕುರದುಪಚಾರ
ಛಂದೋಮಯದಾ ಸೃಷ್ಟಿನಿಬಂಧದಿ
ಜೀವಾತ್ಮಗೆ ಸಾಕ್ಷಾತ್ಕಾರ
ಸಂಚಿತ ಪುಣ್ಯವಿಪಾಕಕೆ ಫಲವಿದು
ಬ್ರಹ್ಮಾನಂದಾಮೃತಸಾರ!

**27/11/2013**

## 15. ಬಾ ಶುಕಭಾಷಿಣಿ!

ಬಾ ಸನ್ಮತಿಸಂಚಾರಣಪಥದಲಿ
ಮಮ ಕಲ್ಪದ್ರುಮಕಾನನಕೆ
ಜೀವನಚೈತ್ರೋದ್ಯಾನದಿ ವಿಕಸಿತ
ಭಾವೋಲ್ಲಾಸದ ಪೂರಣಕೆ

ಸ್ವರವ್ಯಂಜನಸಂಮಿಲನೋತ್ಸಾಹದ
ಸರಿಗಮಪದರತಿಸಂಪದಕೆ
ಕವಿತಾಚಂದನಚರ್ಚಿತ ಪವನದ
ಅವಿರತಮಂದಾಲಿಂಗನಕೆ

ಝುಣಝುಣ ನೂಪುರ ನಿಯತಾವರ್ತಿತ
ಧ್ವನಿಸಂಘೋಷಣಕಾರಣಕೆ
ಆನನವಿಕಸನಧ್ಯಾನಪರಾಗಕೆ
ನಾನಾವಿಧ ಸ್ವರಚುಂಬನಕೆ

ಪಂಚವಟೀತಟಸಮಸೌಂದರ್ಯದ
ಪಂಚೇಂದ್ರಿಯತರುಪಲ್ಲವಕೆ
ಪಂಚವಿಪಂಚೀನಾದತರಂಗದ
ಪಂಚಾಕ್ಷರಸ್ವರಸಂಗಮಕೆ

ಬಾ ಶುಕಭಾಷಿಣಿ ಕವಿವರಪೋಷಿಣಿ
ಭಾಷಾಸಮರಸಭೋಜನಕೆ
ಕರ್ಣರಸಾಯನಗಾನಾಲಾಪಕೆ
ತರಿಕಿಟ ತೋಂ ತೋಂ ತನನನಕೆ

**01/12/2013**

## 16. ಸುಂದರ ಉದ್ಯಾನ!

ಪಶ್ಚಿಮಘಟ್ಟವಿಶಾಲೋದ್ಯಾನದಿ
ನಿಶ್ಚಿತ ತನುಮನ ಸಂಭ್ರಮವು
ರೋಚಕ ದೃಶ್ಯಾವಳಿಸಂಕರ್ಷಿತ
ವಾಚನ ಪ್ರವಚನ ಗಾಯನವು

ಸಿಂಧೂರಾರುಣ ಪರ್ಣಸುಶೋಭಿತ
ಚಂದನಚರ್ಚಿತ ಮಂದಿರವು
ಮಂದಸ್ಮಿತಸುಮ ವರ್ಣವಿಭೂಷಿತ
ಸುಂದರ ವನಶುಭಸನ್ನಿಧಿಯು

ಗಿರಿಶೃಂಗಾನನ ಸಿಂಚಿತ ನಿರ್ಮಲ
ವರತುಂಗಾಜಲಮಾರ್ಜನವು
ಜರ್ಜರ ತರುಮೂಲೌಷಧಮಿಶ್ರಿತ
ತೀರ್ಥೋದಕಸಂಪ್ರಾಶನವು

ಹಿಮಮಣಿಮಾಲಾವೃತ ರಾಮಣ್ಯಕ
ನಿಮ್ನೋನ್ನತಪಥಚಾರಣವು
ಸುಮಮಧುಸಂಚಯನೋತ್ಸವ ವಿಲಸಿತ
ಭ್ರಮರಶ್ರುತಿಸಂಕೀರ್ತನವು

ಸೃಷ್ಟಿವಿಹಂಗಮ ಪರ್ವತಸಂಗಮ
ದೃಷ್ಟ್ಯಾಕರ್ಷಕ ದರ್ಶನವು
ವ್ಯಷ್ಟಿಸಮಷ್ಟಿಯ ಕೃತಿಸಂವೇಷ್ಟಿತ
ಇಷ್ಟಿಗೆ ಸಂತುಷ್ಟ್ಯಾಹುತಿಯು

**23/12/2013**

## 17. ಭಾವ ಸಿರಿ

ಭಾವಗಳ ಸಿರಿಯಿರಲು ಬಡತನದ ಮಾತೇಕೆ?
ಕಾವ್ಯಶರಧಿಯ ತೆರೆಗೆ ಮೌನವಿನ್ನೇಕೆ?
ನೋವು ನಲಿವಿನ ರಸವು ಚಿಮ್ಮುತಿರೆ ಸಮತೆಯಲಿ
ಕಾವುದೇತಕೆ ನಲ್ಲೆ! ಹೃದಯಮಂಥನಕೆ

ಮಣ್ಣ ಕುಡಿಕೆಯ ಒಳಗೆ ಬೆಂದಿರುವ ಕಾಳುಗಳು
ಪ್ರಾಣಾಗ್ನಿಜ್ವಾಲೆಗಳ ಸಂತೈಸುತಿಹುದು
ಕಣ್ಣ ಕುಕ್ಕುವ ಹೊನ್ನು ಕಿಡಿಯನುಲ್ಬಣಗೊಳಿಸಿ
ಕ್ಷಣದಿ ಕರಗಿಸಿ ಸುಖವ ಬದುಕ ಸುಡಬಹುದು

ಗುಣಗಳನು ಸಂಕಲಿಸಿ ಮನದೊಳಗೆ ಸಂಸ್ಕರಿಸಿ
ಮಾನಾಪಮಾನಗಳ ಸಮತೂಕಗೊಳಿಸಿ
ಅನ್ನರಸದಾನಂದವೊಲವಾಗಿ ಒಸರಿಸಲಿ
ಜನುಮಜನುಮದ ಋಣವ ಬಂಧದಲಿ ಇರಿಸಿ

ಬಾಳಿನೊಡತಿಯೆ! ನಿನ್ನ, ಕರೆಯುತಲಿ "ನನ ಚಿನ್ನ!"
ಓಲೆಯಲಿ ಮುತ್ತೊಂದನಿರಿಸುವೆನು ಬೇಗ
ಚೆಲುವು ಮೂಡಲು ಮೊಗದಿ ನಗೆಹೂವ ಕುಡಿಯುವೆನು
ಬಲ್ಲಿದರು ಯಾರಿಲ್ಲಿ? ಹೇಳು ನೀನಾಗ

**24/12/2013**

## 18. ಹೊಸತನ

ಹೊಸವರುಷವು ಹರುಷದೆದೆಯ
ಹೊಸಿಲಿನೊಳಗೆ ದಾಟಲಿ
ಹೊಸತನವನು ಬಸಿರಾಗಿಸಿ
ಉಸಿರುಸಿರಲಿ ಚಲಿಸಲಿ

ಮೈಮನಗಳು ನಲಿದಾಡುತ
ಸಮರಸದಲಿ ಕುಣಿಯಲಿ.
ಮಾಮರದಲಿ ಕೋಗಿಲೆಗಳ
ಹಿಮ್ಮೇಳವು ಮೊಳಗಲಿ

ಹಳತಿನೊಳಗ ಹೂಳ ತೆಗೆದು
ಒಳಿತುಗಳನು ಹೆರಕಲಿ
ನಾಳೆಯೊಳಗೆ ನಿನ್ನೆ ಸೇರಿ
ಬೆಳಕ ಹೊತ್ತು ಮೆರೆಯಲಿ

ತೊದಲ ನುಡಿಗೆ ಹೃದಯದಲ್ಲಿ
ಮುದನದಿಗಳು ಉಕ್ಕಲಿ
ಮುದಿಜೀವವು ಹಿತವಾಡಲು
ಹದವರಿಯುತ ಹರಿಯಲಿ

ಹೊಸತಾಗಲಿ ಪ್ರತಿನಿಮಿಷವು
ಹೊಸಗವಿತೆಯ ಹಾಡಲಿ.
ಹೊಸದೊಸಗೆಯು ತಾ ವಿಸರಿಸಿ
ಹೊಸ ಕಂಪನು ಸೂಸಲಿ

**30/12/2013**

## 19. ನಿನ್ನೊಲವಿನೊಳು ನಾನು

ಹೊನಲಂತೆ ರಭಸದಲಿ ಹರಿಯುತಿರೆ ನಾನು
ಮೌನದಲಿ ಸೆಳೆಯುತಿಹೆ ಕಡಲಂತೆ ನೀನು

ಒಲವ ಜಲಧಿಯ ಸೇರಿ ಕಳೆಯುವೆನು ನನ್ನತನ
ತಿಳಿಗೊಳಿಸು ಎದೆಯೊಳಗ ಬಣ್ಣವನು ಬೇಗ
ಕಳೆಯಂತೆ ನಾ ತಂದ ಬೇಡಗಳ ಒಗೆದುಬಿಡು
ಅಲೆಯ ಬಲದಲಿ ನೀನು ತೀರದೆಡೆಗಾಗ

ಝರಿಯು ಭೋರ್ಗರೆಯುವುದು ಗುರಿಯು ಮುಂದಿರಲು
ಶರಧಿಯೊಳು ಒಂದಾಗೆ ತನ್ನತನ ಕಳೆದು;
ಶರಣಾಗಿ ಹಗುರಾಗಿ ಹರಹಾಗಿ ಬೆರತಂತೆ
ಕರಗುವೆನು ನಿನ್ನೊಡಲ ಪ್ರೀತಿಯೊಳಗಿಳಿದು

ಗರಿಮೆಯಾ ಸುಳಿಯೊಳಗೆ ಸಿಲುಕಿ ನಲುಗಿದ ಕೀರ್ತಿ
ಹರಳಾಗಿ ಮರಳಂತೆ ತಾ ದಡದೊಳಿರಲು;
ಭರತದಲಿ ಸೆಳೆದದನು ಮುತ್ತಾಗಿ ಮಾರ್ಪಡಿಸಿ
ಧರಿಸುತಿಹೆ ನತ್ತಂತೆ ಹೊಳಪೀಯುತಿರಲು

ಸುಪ್ತ ಸ್ಮೃತಿಯಲಿ ಉಳಿದ ಗುಪ್ತ ಬಯಕೆಗಳೆಲ್ಲ
ತಪ್ತಾಗ್ನಿ ಜ್ವಾಲೆಯಲಿ ಮೇಲೇರುತಿರಲು;
ಪತನವಾಗಲಿ ಕೆಳಗೆ ಬುವಿಗಿಳಿವ ಮಳೆಯಂತೆ
ತಪವಗೈಯಲಿ ಮತ್ತೆ ನಿನ್ನೆಡೆಗೆ ಬರಲು

**15/01/2013**

## 20. ಗಿರಿಯ ಭಾವಕೀರ್ತನ

ಹೇಗೆ ಹೊರಟಿತು ಸ್ಥವಿರಗಿರಿಯಲಿ
ಸುಗಮಭಾವಸುಕೀರ್ತನ?
ಬಳುಕಿ ಬಾಗುತ ಸಾಗಿತೇಕದು
ಕಳೆದುಕೊಳ್ಳಲು ಮೈಮನ?

ಹಾಡಿ ನರ್ತಿಸಿ ಕೀರ್ತಿ ಗಳಿಸಿತು
ನಾಡ ನೆಲದಲಿ ಬಿಮ್ಮನೆ
ಜಲಧಿಯಲೆಯಲಿ ತನ್ನ ಹೆಸರನು
ಕಳೆಯಿತೇಕದು ಸುಮ್ಮನೆ?

ಮೌನತಳದಲಿ ಗಾನವಡಗಲು
ಲೀನಗೊಂಡಿತೆ ಭಾವವು?
ತನ್ನ ತನವನು ಕಳಚುತೆಲ್ಲವು
ಬಾನಿಗೇರಿತೆ ಆತ್ಮವು?

ಮತ್ತೆ ಮಳೆಯಲಿ ಬುವಿಗೆ ಇಳಿಯಿತೆ?
ಮತ್ತೆ ಜೀವಕೆ ಚಲನೆಯೆ?
ಮತ್ತೆ ಜನನವೆ ಮತ್ತೆ ಮರಣವೆ?
ಮತ್ತೆ ಬಸಿರೊಳು ಶಯನವೆ?

**29/01/2014**

## 21. ಬಾರೋ ವಸಂತ

ಸುಮಸುಂದರಸಮ ಪದಬಂಧದ ಕಲ–
ಕಂಠದ ವನಘಂಟಾಧ್ವಾನ
ಚೈತ್ರೋದ್ಯಾನದಿ ಪ್ರೇಮೋತ್ಸವರತ
ವಸಂತದೇವಗಿದಾಹ್ವಾನ

ಬಾರೋ ಲತೆಗಳ ಮಂಟಪ ಮಧ್ಯಕೆ
ರಸನೈವೇದ್ಯದ ಸ್ವಾದನೆಗೆ
ಪೂರ್ವದಿಗಂತದ ನವ ಅರುಣೋದಯ
ಕಿರಣೋಪಮ ಹೃದ್ವಿಕಸನಕೆ

ಗಿರಿಕಟಿಯಟವಿಯ ಹೊನಲ ವಿಹಾರಕೆ
ಸ್ವಾದೂದಕಸಂಪ್ರಾಶನಕೆ
ಜಲತಾಡನದಾ ಕೇಲಿಯ ತುಷ್ಟಿಗೆ
ಭಾವೋಲ್ಲಾಸದ ಕರ್ಷಣೆಗೆ

ಬಾ ತರುಶಾಖೆಗೆ, ಬಾ ತರುಮೂಲಕೆ
ನಾನಾವಿಧಫಲಭೋಜನಕೆ
ಪಂಚವಟೀತಟಪರ್ಣಕುಟೀರಕೆ
ಶೃಂಗಾರರ್ಷಿಗಳಾಶ್ರಮಕೆ

ನವತಾರುಣ್ಯದ ಹೃದಯಸರೋಜಕೆ
ಬಾರೋ ಮಧುಸಂಪೋಷಣೆಗೆ
ಜೀವನಯಾತ್ರಾಪಥಸಂಕ್ರಮಣಕೆ
ಆನಂದಾಮೃತವಿತರಣೆಗೆ.

**09/02/2014**

## 22. ಬಂಧವಿಲ್ಲದ ಪ್ರೇಮ

ಬಂಧವಿಲ್ಲದ ಒಲವು ಮೌನಘನವಾಗಿರಲು
ಮಾತೇಕೆ ಬೇಕೆಮಗೆ 'ಪ್ರೇಮಿಸುವೆ' ಎಂದು
ಮತಿಯ ಚಾತುರ್ಯಗಳ ಬಯಲಿನಲಿ ಕಿತ್ತೊಗೆದು
ಜಗದೊಲವನರಿಯೋಣ ಸ್ಥಿರವಾಗಿ ನಿಂದು

ಮಣ್ಣ ಸಾರವ ಸೆಳೆದು ಮರದೆಲೆಗೆ ಉಣಿಸುತಿಹ
ಬೇರು ತಾ ಹೇಳದದು 'ಪ್ರೀತಿಸುವೆ' ಎಂದು
ಹಣ್ಣೆಲೆಯು ನೆಲಕುದುರಿ ಬೇರ ತಳಕಿಳಿವಾಗ
ಮಮತೆಯಲಿ ಕೇಳುವುದೆ 'ನೀನಾರ ಬಂಧು?'

ಮೋಡಗಳು ನೀರ್ಗರೆದು ಶಾಂತವಾಗುವ ಹಾಗೆ
ಒಪ್ಪಿಸುತ ಪ್ರೇಮವನು ಹಗುರಾಗೆ ನಾವು
ಪ್ರಕೃತಿಯಲಿ ಪಸರಿಸಿಹ ತತ್ತ್ವವದು ಹರಿವಾಗಿ
ನಮ್ಮೊಳಗೆ ನಿಲ್ಲುವುದು ನಿಶ್ಚಲದ ಅರಿವು

ನಮ್ಮೊಲವ ಧಾರೆಯದು ಪ್ರಕೃತಿಯಲಿ ಒಂದಾಗಿ
ಲತೆಯಂತೆ ಚಿಗುರುತಲಿ ಫಲದೊಳಗೆ ಬರಲಿ
ಮುಗುಳೊಂದು ಕಾಯ್ಕಟ್ಟಿ ತೊಟ್ಟು ಕಳಚುವ ಹಾಗೆ
ಮಾತೆಲ್ಲ ಮುಗಿದಂತೆ ಶಿವವಾಗಿ ನಿಲಲಿ

ಜಾತಿಮತಪಂಥಗಳ ಎಲ್ಲೆಯನು ಮೀರುತಲಿ
ಸಹಜಸೃಷ್ಟಿಯ ಪ್ರೇಮವವತರಿಸಿ ಬರಲಿ
ಚಿತ್ತಾಭಿಷೇಕದಲಿ ನಿತ್ಯವದನರ್ಚಿಸುತ
ಸತ್ಯಸುಂದರಜಗಕೆ ಮನವನರ್ಪಿಸಲಿ

**11/02/2014**

## 23. ನಲ್ಲೆಯೊಲವು

ನಲ್ಲೆಯೊಲವಿನ ಜಲಧಿಯಲೆಯಲಿ
ಮೆಲ್ಲಮೆಲ್ಲನೆ ತೇಲುತ
ಚೆಲ್ಲಿತೆನ್ನೆದೆಯೊಳಗ ಭಾವವು
ಗಲ್ಲಕೋಕುಳಿಯೆರಚುತ

ನಲಿವ ನೊರೆಗಳ ಮೇಲಕೇರಿಸಿ
ಬಿಳಿಯ ನಗುವನು ಬಿಂಬಿಸೆ
ಬಾಳ ಬಾನಲಿ ಕೆಳಕೆ ಬಾಗಿಸಿ
ಏಳು ಬಣ್ಣಗಳೇಳಿಸೆ

ಸೋಲಿನಲೆಯಲಿ ಛಲವ ತುಂಬಿಸಿ
ಗೆಲುವ ಮೆಟ್ಟಿಲಿಗೇರಿಸೆ
ಕಲ್ಲ ಹೃದಯದಿ ಸೊಲ್ಲನಿಂಗಿಸಿ
ಚೆಲುವಿನೊರತೆಯ ಚಿಮ್ಮಿಸೆ

ಎಲ್ಲೆಯಿಲ್ಲದ ನಲ್ಲೆಯೊಲವಿಗೆ
ಸಲ್ಲಲೆನ್ನಯ ಸರ್ವವು
ಕಳೆದೆನೆಂಬುದು ಕಳಚಿ ಹೋಗಲಿ
ನಿಲ್ಲಲೆದೆಯಲಿ ಶೂನ್ಯವು

**16/02/2014**

## 24. ಬಾರೋ ಮದನನೆ!

ಹೃದಯೋದ್ಯಾನದಿ ಪದವಿಡು ಬಾರೋ
ಮದನನೆ! ಸುಮಮಧುವರ್ಧನನೆ!
ವದನವನರಳಿಸಿ ಮೋದವ ತಾರೋ
ಮಾಧವಸಮ ಸಂಮೋಹನನೆ!

ಭವ್ಯವಸಂತದ ಮತಿಸಂಕಾಶಕೆ
ಭಾವಾವರಣವನಣಿಗೊಳಿಸಿ
ಕವಿತಾಪದಸಂಚಾರಣಪಥವನು
ನವಸುಮಶರದಲಿ ಶೃಂಗರಿಸಿ

ಛಂದೋವೃಂದದಿ ಬಂಧಿತ 'ಜೀವ'ನ
ಮಂದಿರಮೌನದೊಳನುರಣಿಸಿ
ಸುಂದರ ವೈಖರಿವಲ್ಲರಿಯಂದಕೆ
ಚಂದ್ರವಿಕಾಸದ ಗತಿಯಿರಿಸಿ

ಸಂತತಧಾರಾಚಿತ್ತದಿ ಬಾರೋ
ಚಿಂತಿತ ಮನಸಿನ ರಥವೇರಿ
ಆಂತರ್ಯದಿ ನೀ ಚೈತ್ರವ ತಾರೋ
ಅಂತರತಮಮೃದುಪದವೇರಿ

**09/03/2014**

## 25. ನಗೆ ಮಲ್ಲಿಗೆ

ನವವಸಂತದಲರಳಿ ನಿಂತಿಹು–
ದಾವುದೀ ನಗೆ ಮಲ್ಲಿಗೆ?
ಆವ ತಾರೆಯ ಛವಿಯ ತಂದಿದೆ?
ಭಾವಲತೆಗಳ ಗೆಲ್ಲಿಗೆ

ಮತ್ತಕೋಕಿಲರವದ ಕಲವದು
ಸುತ್ತಲೂ ಹರಿವಾಗಿರೆ;
ಬತ್ತದಿರುವಾ ಒಲವಿನೊರತೆಯು
ಸತತವೂ ಎದೆಯಲ್ಲಿರೆ;

ಮತ್ತೆ ಬಂದಿಹ ಈ ಯುಗಾದಿಗೆ
ಚಿತ್ತವಾರಮೆಯಾಗಿರೆ;
ನಿತ್ಯಸಂತಸವೀವ ಚೆಲುವಿನ
ನತ್ತಿನೈಸಿರಿಯಂತಿರೆ;

ಬೇವು ಬೆಲ್ಲವನರೆದ ಬದುಕಿನ
ಸವಿಯಲರಳಿಹ ಮಲ್ಲಿಗೆ!
ಕವಿಯ ಚೇತನಬಿಂಬದಂತಿಹ
ಹೂವಿದೆನ್ನಯ ನಲ್ಲೆಗೆ.

**28/03/2014**

## 26. ಮಾಧವ ಬಾ

ಮಾತಿಗೊಂದು ಮಿತಿಯನಿರಿಸಿ
ಗತಿಯ ತೋರೊ ಮಾಧವ!
ಪ್ರೀತಿಯುಸಿರನೆದೆಯಲಿರಿಸಿ
ಮತಿಗೆ ಬಾರೊ ಕೇಶವ!

ಜಗದಗಲಕೆ ಪಾದ ಬೆಳೆಸಿ
ಸೊಗವನಿತ್ತ ದೇವನೆ!
ನಗುನಗುವಲಿ ಮೆಲ್ಲ ಬಿರಿದು
ಮೊಗದ ಮಾತ ಕಾಯ್ವನೆ!

ಎಲ್ಲ ದಿಕ್ಕಿನೆಡೆಗೆ ಹರಹಿ
ಸೊಲ್ಲಿನರಿವ ಹಿಗ್ಗಿಸಿ
ಕಲ್ಲು, ಮಣ್ಣು, ಗಾಳಿಯಲ್ಲು
ನಿಲ್ಲುವಂತೆ ಬಾಗಿಸಿ

ಮೇಲಕೇರಿ ಹಾರದಂತೆ
ತಳದ ಅರಿವನುಬ್ಬಿಸಿ
ಕೆಳಕೆ ಬಾಗಿ ಬೀಳದಂತೆ
ಮೇಲಕೆನ್ನನೆಬ್ಬಿಸಿ

ನಿನ್ನ ಚರಣಕಮಲದಲ್ಲಿ
ಮನದ ಹರಿವ ನಿಲ್ಲಿಸಿ
ನನ್ನದೆಂಬುದೆಲ್ಲ ಮರೆಸಿ
ಜ್ಞಾನದೀಪ ಬೆಳಗಿಸಿ

**30/03/2014**

## 27. ಚಂದಮಾಮ

ನೀಲಬಾನಿನ ಬೆಳ್ಳಿಜೋಲಿಯೊ–
ಳೆದ್ದು ಕುಣಿಯುವ ಕಂದನೆ!
ನಿನ್ನ ಅಮ್ಮನದೆಲ್ಲಿ ಹೋದಳು?
ಬೀಳಬೇಡವೊ ಚಂದ್ರನೆ!

ಚೆಲುವ ಗಲ್ಲದಿ ಹಾಲು ಚೆಲ್ಲುತ
ಜಿಗಿಯುತಿರುವುದು ಏತಕೆ?
ಬಾಲರಿಲ್ಲವೆ ನೀಲಿಯಂಗಳ–
ದಲ್ಲಿ ಆಡಲು ಆಟಕೆ?

ಉಬ್ಬಿದಂತಿಹ ನಿನ್ನ ಮೋರೆಯು
ತೆಳ್ಳಗಾಯಿತದೇತಕೆ?
ಕರಿಯ ತಬ್ಬಿಹ ಇರುಳಲೊಬ್ಬನೆ
ಕಾಣೆಯಾಗುವುದೇತಕೆ?

ಅಮ್ಮರೆಲ್ಲರು ನಿನ್ನ ತೋರಿಸಿ
ಚಂದಮಾಮಾ ಎನ್ನಲು
ಕಂದರೆಲ್ಲರ ಮೊಗಕೆ ಬಂದೆಯ?
ತುತ್ತು ಅನ್ನವನುಣ್ಣಲು

ಕೆನ್ನೆ ಚಿವುಟುತ ಮುತ್ತನಿಕ್ಕಲು
ಉಬ್ಬಿ ಹೋದೆಯ ಕ್ಷಣದಲಿ?
ಹಾರಿ ಮೇಲಕೆ ತಿಂಗಳಿರುಳಲಿ
ಮತ್ತೆ ಬಂದಯ ಬಾನಲಿ?

**02/03/2014**

## 28. ಒಕ್ಕಲಾಟ

ಚಿಕ್ಕವರ ಎದೆಯೊಳಗೆ ಹೊಕ್ಕಿರುವ ಪದವೊಂದು
ಉಕ್ಕಿರುವ ನಗೆಯಲ್ಲಿ ಹಾಡಾಗಬೇಕು
ಅಕ್ಕರೆಯ ಮಾತುಗಳು ಮಾಧುರ್ಯದರಳಾಗಿ
ಪಕ್ಕವಾದ್ಯದ ಲಯಕೆ ಪುಟಿಯುತಿರಬೇಕು

ಹಕ್ಕಿಯುದರದಿ ಬೆಂದ ಹಣ್ಣಿನಾ ಬೀಜವದು
ಹಿಕ್ಕೆಯಲಿ ನೆಲಕುದುರಿ ಮರವಾಗಬೇಕು
ಅಕ್ಕಿಸಿಪ್ಪೆಯು ಬಿಟ್ಟ ಕಲಗಚ್ಚ ತಾ ಕುಡಿದು
ಚೊಕ್ಕ ಹಾಲನು ಹಸುವು ಸುರಿಸುತಿರಬೇಕು

ಒಕ್ಕಲಿಗ ತಾನುತ್ತು ಬೆಳೆದ ಧಾನ್ಯವನೊಕ್ಕಿ
ತಕ್ಕ ರೊಕ್ಕವ ಗಳಿಸಿ ಸುಖಿಯಾಗಬೇಕು
ಕೊಕ್ಕಿನಲಿ ಕಾಳುಗಳನಿಕ್ಕುತಲಿ ಮರಿಗಳಿಗೆ
ಮಿಕ್ಕುದನು ತಾನುಣುವ ಖಗವಾಗಬೇಕು

ಸಿಕ್ಕಸಿಕ್ಕೆಡೆಗಳಲಿ ಬೆಳಕ ಬಾಣವನೆಸೆದು
ರಕ್ಕಸರನಟ್ಟಿಸುವ ರವಿಯಾಗಬೇಕು
ಉಕ್ಕುತಿಹ ಭಾವದಲಿ ಚಂದ್ರಬಿಂಬವು ಹೊಕ್ಕು
ಸೊಕ್ಕುತಲಿ ಹುಣ್ಣಿಮೆಯ ಸುಧೆಯಾಗಬೇಕು.

**12/02/2014**

## 29. ಚೆಲ್ಲದಿರಲಿ ಚೆಲುವು

ಚೆಲ್ಲದಿರಲಿ ನಿನ್ನ ಚೆಲುವು
ನಿಲ್ಲಲೆನ್ನ ಎದೆಯಲಿ
ಒಲವ ಜಲಧಿತಲವ ತಲುಪಿ
ಮೇಲಕೇರಿ ತೇಲಲಿ

ಮನವು ಹೊನಲಿನಂತೆ ಹರಿದು
ನಿನ್ನ ಒಡಲ ಸೇರಲಿ
ತನ್ನತನವ ಕಳೆಯಲುಳಿದ
ಸೊನ್ನೆ ತುಟಿಯಲರಳಲಿ

ನಲ್ಲೆ! ನಿನ್ನ ಮೊಗದ ನಗುವು
ಸೊಲ್ಲಿನೊಳಗೆ ತುಂಬಲಿ
ಮೊಲ್ಲೆ ಹೂವಿನಂತೆ ಬಿರಿದು
ಎಲ್ಲೆ ಮೀರಿ ಘಮಿಸಲಿ

ನೆಲದ ಮಣ್ಣನೆಳೆಯುತೆದೆಯ
ತಳದಿ ಹಸಿರನೊಡೆಯಲಿ
ಚೆಲುವನೆಲ್ಲ ಚೆಲ್ಲುತಿರಲಿ
ಬಾಳಿನಗಲ ಹರಡಲಿ

**14/04/2014**

## 30. ಹಗುರ

ಮಲ್ಲಿಗೆಯ ಹೂವೊಂದು ಕನಸ ತೂಗಲಿ ಬಂದು
ಚೆಲ್ಲುತ್ತ ಪರಿಮಳವ ನನ್ನೆದೆಯಲಿ
ಕಲ್ಲು ಬಂಡೆಯೇ ತಕ್ಕಡಿಯ ತೂಗುಗಲ್ಲಾದರೂ
ತುಲನೆಯಾಗದ ತೂಕ ಸರಿಹೊಂದಲಿ

ಇಲ್ಲಸಲ್ಲದ ಭಾರವೆತ್ತಿ ನಿಂತಿರೆ ಮನಸು
ಗೆಲುವು ತನದೇ ಎಂಬ ಭಾವದೂಗಿ
ಏಳಲಾಗದು ಮೇಲೆ ಕಳಚದಿರೆ ಬೇಡಗಳ
ಕೊಲ್ಲುವುದು ಹೃದಯವನೇ ಚಿಂತೆಯಾಗಿ

ಮೊಲ್ಲೆ ಹೂವಿನ ಗಂಧ ಉಸಿರ ತೀಡಲಿ ಇಂದು
ಕಲ್ಲೆದೆಯು ಭಾರವನು ತಾ ಕಳೆಯಲಿ
ಮೆಲ್ಲ ಮೆಲ್ಲನೆ ಕನಸು ಹಗುರಾಗಿ ಮೇಲ್ಬರಲಿ
ಸೊಲ್ಲಡರಿ ಸ್ವಾರ್ಥಗಳು ತಾ ಕಳಚಲಿ

**16/04/2014**

## 31. ಬೆಂಗದಿರ–ತಂಗದಿರ

ಬಾನೇರಿ ಬೆಂಗದಿರ ತಾ ಬಂದು ಹಗಲಿನಲಿ
ತನುವಲ್ಲಿ ಬೆವರಿಳಿಸಿ ತಂಪುಗೊಳಿಸೆ
ತಣ್ಣನೆಯ ತಂಗದಿರ ತಾ ಬಂದ ಇರುಳಿನಲಿ
ಮನದಿ ಮದನನ ಕೆಂಪ ಕಾವನಿರಿಸಿ

ಇಳೆಯ ಮಣ್ಣನು ಸುಟ್ಟು ಹದಗೊಳಿಸಿ ಕಾಳಿಟ್ಟು
ಕಾಲಕಾಲಕೆ ಮಳೆಯ ನೀರ ನೀಡಿ
ಮೊಳಕೆಯೊಡೆಯುತ ಕುಡಿಯು ಚಿಗುರಿ ಚಿಮ್ಮುತಲಿರಲು
ನಳನಳಿಪ ತೆನೆಗಳಲಿ ರವಿಯ ನೋಡಿ

ಕುಸುಮಶರನೊಡನಾಟ ನಿಶೆಯ ಬೆಳಕಿನ ನೋಟ
ಪಿಸುಮಾತಿನಾಸೆಗಳ ಹಸನುಮಾಡೆ
ಬಸಿರಿನಲಿ ಜೀವಕಣವಂಕುರಿಸಿ ಸಂಚರಿಸಿ
ಹೊಸಗೂಸುವಳುವಾಗ ಶಶಿಯ ನೋಡಿ

ಬಿಸಿಲ ಬೆವರಿನ ಗಂಧವರಳಿಸುತ ಕುಡಿಗಳನು
ಹೊಸ ಕಾಳಿನೊಳ ಹೊಕ್ಕು ಮೊಗಕೆ ಬರಲಿ
ಹಸುಗೂಸಿನುಸಿರಿನಲಿ ಸೂಸುತಿಹ ಗಂಧವದು
ಬಿಸಜದಲದಲಿ ಹೊಮ್ಮಿ ಎದೆಗೆ ಬರಲಿ

**16/04/2014**

## 32. ಹರಿ! ನಿನ್ನ ಚರಣದೊಳು

ಹರಿ! ನಿನ್ನ ಚರಣದೊಳು ಮನದ ಹರಿವಿರುವಂತೆ
ವರವಿತ್ತು ಹರಸೆನ್ನ ಹೃದಯದೇವ!
ಕರಣಗಳ ಹುರಿಗೊಳಿಸಿ ಭಾವಶರವನು ಸಿಗಿಸಿ
ಗುರಿಯ ಕರುಣಿಸು ಎನಗೆ ಪರಮದೇವ!

ಏಳು ಬೀಳುಗಳೆಲ್ಲ ಸಹಜಸೃಷ್ಟಿಯ ಹಾಗೆ
ಬಾಳಿಗಂದವನಿತ್ತು ನಗುವಿನಲಿ ಬರಲಿ
ಸಾಲು ಸಾಲಲಿ ನಿಂದ ನಿನ್ನೆಯನುನುಭವವೆಲ್ಲ
ಕಾಲಕಾಲಕೆ ಬಲಿತು ಫಲವಾಗುತಿರಲಿ

ಸಫಲವಿಫಲಗಳೆಲ್ಲ ಮೂಜಗದಿ ಪಸರಿಸಿಹ
ಅಪರಿಮಿತಪದತಲಕೆ ಹವಿಯಾಗಿ ಸಲಲಿ
ಚಪಲತೆಯ ಚಿತ್ತವನು ಹದಗೊಳಿಸಿ ಪದವೊಂದು
ಜಪದ ಕುಡಿಗಳಲೊಡೆದು ತೆನೆಯಾಗಿ ಬರಲಿ

ನಿನ್ನಡಿಯ ಹುಡಿಯೆಲ್ಲ ಜಗದಗಲ ಹರಡಿರಲು
ನನ್ನ ಮನವದರಲ್ಲಿ ಒಂದಾಗಿ ನಿಲಲಿ
ಸೊನ್ನೆಯೊಳು ಸೊನ್ನೆ ತಾ ಕಳೆದುಳಿದ ಸೊನ್ನೆಯಲಿ
'ನಾನು' ಎಂಬರಿವೆಲ್ಲ ಸೊನ್ನೆಯಂತಿರಲಿ.

**18/04/2014**

## 33. ಈ ಕ್ಷಣ

ತನ್ನ ಕಾಲಿನ ಮೇಲೆ ನಿಲ್ಲಲಾರದ ಕಾಲ
ಓಡೋಡಿ ಮರೆಯಾಗಿ ಹೋಗುವುದು ಸುಳ್ಳು
ಮನವೆ! ನೀ ಬೆಂಬತ್ತಿ ಹೆಜ್ಜೆ ಗುರುತನು ಹುಡುಕೆ
ಇಲ್ಲದಿರುವುದು ಹೇಗೆ ಸಿಕ್ಕೀತು ಹೇಳು

ಭೂತಕ್ಕೆ ನೆಲೆಯಿಲ್ಲ ಭವ್ಯವೆಲ್ಲವು ಊಹೆ
ಇರುವುದೀ ಕ್ಷಣವೊಂದೆ–ಅನುಭವಿಸು ಮೊಗೆದು
ನಿನ್ನೆಯಾ ನೆನಪಿನಲಿ ನಾಳೆಯಾ ಚಿಂತೆಯಲಿ
ಮರೆಯದಿರು ಈ ಹೊತ್ತ ಇನ್ನೆಂದು ಸಿಗದು

ಬುವಿಯ ಗುರುತರ ಕಾಂತವೆಲ್ಲವನು ಸೆಳೆದಂತೆ
ನಿನ್ನೂಹೆಗಳ ಸೆಳೆದು ಎಳೆದಾಡುತಿಹುದು
ಒಳಗಿನಿಂದಲೆ ಜಿಗಿದು ಹಾರುವಾ ಯತ್ನದಲಿ
ಇಲ್ಲದ್ದು ಇದ್ದಂತೆ ನಿನಗನಿಸುತಿಹುದು

ನಿನ್ನೆ–ನಾಳೆಗಳೆಲ್ಲ ಇರುವುದೀ ಕ್ಷಣದಲ್ಲಿ
ಬಿಟ್ಟರದು ಸಿಗದೆಂದೂ ಈ ಜನುಮದಲ್ಲಿ
ಬಂದ ಊಹೆಯು ನಿಂತು ಕೆಳಜಾರುವಾ ಮುನ್ನ
"ಇಂದು" ಇರುವುದು ನೋಡು ಆ ಬಿಂದುವಲ್ಲಿ

ಈ ಕ್ಷಣದ ಹೊತ್ತೊಂದು ಬಿಂದುಮಾತ್ರದಿ ಕಂಡು
ಅಲ್ಲಿ ವಿಸ್ತರಿಸೆ ಅದು ನಿರಪೇಕ್ಷದಂತೆ
ಆದ್ಯಂತ್ಯರಾಹಿತ್ಯವೇಕರಸವಾಗಿರದೆ
ನೀ ತಿಳಿದುದೆಲ್ಲವೂ ಸಾಪೇಕ್ಷದಂತೆ

ಮನವೆ! ನೀ ಭ್ರಮಿಸದಿರು, ನಿನ್ನೊಳಗೆ ನೆಲೆಯಾಗು
ಅನುಭವಿಸು ಅನವರತ ಶಾಂತತೆಯ ಸೊಬಗ
ಈ ಕ್ಷಣದ ಅರಿವೊಂದು ಹರಿವಾಗಿ ವಿಸ್ತರಿಸಿ
ಜಗದಗಲ ಹರಡುತಿರೆ– ನೋಡಲ್ಲಿ ಬೆರಗ

**27/04/2014**

## 34. ಬಾ ನುಡಿಯೊಡತಿ!

ನುಡಿಯೊಡತಿ! ನೀಡೆನಗೆ
ಆಡುಮಾತಿನ ಬೆಡಗ
ನಡೆಸೆನ್ನ ಕೊಠಡಿಯಿಂದಾಚೆಗೂ ಬೇಗ
ಗುಡಿಯಿಂದ ಹೊರಬಂದು
ಓಡಾಡಿ ಬೀದಿಯಲಿ
ನುಡಿಸೆನ್ನ ಜಿಹ್ವೆಯಲಿ ಹೊಸತೊಂದು ರಾಗ

ಅಡಿಗಡಿಗೆ ದಯಮಾಡು
ನುಡಿಗಟ್ಟನಿಡುವಾಗ
ಎಡವದೇ ನಡೆವಂತೆ ತೋರೆನಗೆ ಜಾಗ
ಪಡೆನುಡಿಗೆ ಗಡಿಬಿಡಿಯ
ಸಡಗರದ ಸೊಬಗಿರಿಸಿ
ಬೆಡಗಿನೊಡವೆಯ ತೊಡಿಸಿ ನೋಡುವೆನು ಆಗ

ಬಡವನೊಡಲಿನ ಕಿಡಿಗೆ
ಗುಡಿಯ ಕತ್ತಲೆಯಳಿದು
ದಡಬಡನೆ ಓಡುತಿರೆ ಬಾ ಮಾತಿನೊಡತಿ!
ತಡಿಕೆಗೋಡೆಯೊಳಿಣುಕಿ
ಸೊಡರಿನೊಳು ಪ್ರಜ್ವಲಿಸಿ
ಬಾಡುತಿಹ ಮೊಗವೇರಿ ಬಾರೆ ಕನ್ನಡತಿ!

ಬೇಡದಾ ನುಡಿಗಳನು
ಕಾಡಿನೊಳಗಟ್ಟಿಬಿಡು
ಹಾಡಾಗಿ ಹದಗೊಂಡು ಹಿಂತಿರುಗಲೆದೆಗೆ
ನಾಡ ಕನ್ನಡಿಗರಾ
ಜಡತನವ ಕಳೆವಂತೆ
ಆಡಿ ಕುಣಿಯುತಲಿರಲಿ ಡಮರುಗುದ ದನಿಗೆ

**27/04/2014**

## 35. ಸುಳ್ಳು

ದೇವನಿರುವುದು ಸುಳ್ಳು, ಇಲ್ಲವೆಂದರೂ ಸುಳ್ಳು
ಭವದಿ ಭ್ರಮಿಸುವ ಮನದ ಏರಿಳಿತವೆಲ್ಲ
ಭಾವತೀವ್ರತೆಯಲ್ಲಿ ಅನುಭಾವವಡಗಿಲ್ಲ
ಅವಸಾನದಂಚಿನಾ ಅಲೆಗಳಂತೆಲ್ಲ

ಅಲೆಗಳೆರಡರ ಮೂಲ ಜಲಧಿಯಾಳದೊಳಿರಲು
ತಳಕಿಳಿಯದೇ ತಿಳಿದ ತಿಳಿವು ತಿಳಿವಲ್ಲ
ಅಳತೆಗೋಲಲಿ ಅಳೆದು ಆಳವನು ಹೇಳುತಿಹ
ಸೊಲ್ಲುಸೊಲ್ಲಿನ ತಿಳಿವು ಜೊಳ್ಳಿನಂತೆಲ್ಲ

ತಳದೊಳಿಳಿಯದ ಅರಿವೇ ಅಲೆಯ ರೂಪದ ಮನವು
ಸುಳ್ಳಿನಲ್ಲೊಡೆಯುತಿಹ ಗುಳ್ಳೆಯಂತೆಲ್ಲ
ಮೂಲಮನೆಯಲಿ ಕುಳಿತು ಮನದ ಉಬ್ಬರವಿಳಿಸಿ
ಎಲ್ಲವರಿತಿಹ ಮೌನಕೇರಿಳಿತವಿಲ್ಲ

ಧೂಳುಧೂಳಲಿ ನಲಿವ ಒಲವಿನೊಳು ಒಂದಾಗಿ
ತಿಳಿವಿನಾಳವ ತುಳಿಯೆ ಇದ್ದರೂ ಇಲ್ಲ
ಇಲ್ಲಗಳ ಇರುವಿಕೆಯ ಇಲ್ಲವಾಗಿಸಿ ಮನವು
ತೇಲುತಲಿ ತೆಳುವಾಗೆ ಇದ್ದಂತೆ ಎಲ್ಲ

**28/04/2014**

## 36. ನಾನು ಹಾರುವ ಹಕ್ಕಿ

ನಾನು ಹಾರುವ ಹಕ್ಕಿ ಬಾನೊಳಗೆ ತೂರುವೆನು
ನನ್ನದೆಂಬುವ ಭಾವಗಳನೆಲ್ಲ ಕಳಚಿ
ನನ್ನೊಡಲ ಕುಡಿಯೊಂದು ಮೂಡುವಾ ಹೊತ್ತಿನಲಿ
ನಿನ್ನ ಮನೆಹಿತ್ತಲಿಗೆ ಬರುವೆ ಮೈಚಾಚಿ

ನೀನುಂಡ ಹಣ್ಣುಗಳ ಬೀಜಗಳನೂರಿಬಿಡು
ನಿನ್ನ ಕೈದೋಟದಲಿ ಬೆಳೆಸೊಂದು ಗಿಡವ
ನಾನಲ್ಲಿ ಗೂಡೊಂದ ಕಟ್ಟಿ ಮೊಟ್ಟೆಗಳಿಟ್ಟು
ತನುಮನದ ಕಾವ್ಕೊಟ್ಟು ಮೆರೆವೆ ತಾಯ್ತನವ

ಒಂದೆರಡು ಹಣ್ಣುಗಳ ಕೊಕ್ಕಿನಲಿ ನಾ ಕುಕ್ಕಿ
ತಂದು ಮರಿಗಳಿಗಿತ್ತು ಬೆಳೆಸುವೆನು ಬೇಗ
ಹಿಂದೆ ಮುಂದಕೆ ನೆಗೆದು ನಲಿಯುತಿರೆ ನನ್ನೊಲವು
ಬಂದ ದಾರಿಯ ಹಿಡಿದು ತೆರಳುವೆನು ಆಗ

ಹಿತ್ತಲಿನ ಹಣ್ಣುಗಳ ಹಕ್ಕಿಗಳು ತಿಂದುಗುಳಿ
ಬಿತ್ತುತಿರೆ ಬೀಜಗಳ ಹರಡುವುದು ಹಸಿರು
ಸುತ್ತಮುತ್ತಣ ಬನದ ಚೆಲುವು ಚಿಗುರತಲಿರಲು
ಮತ್ತೆ ಹರಿವುದು ಎನ್ನ ಬಸಿರಿನಲಿ ಉಸಿರು

ಗಿಡವನೊಂದನು ನೆಟ್ಟು ನೀರೆರೆದು ಪೋಷಿಸುತ
ಸಡಗರದ ಬದುಕನ್ನು ಬಾಳುತಿರೆ ನೀನು
ಕುಡಿಯೊಡೆದು ಫಲವಿಡಲು ಹರಡುವೆನು ಎಲ್ಲೆಲ್ಲೂ
ಕಾಡ ಸೊಬಗಿನ ನಡೆಗೆ ನಲಿಯುವೆನು ನಾನು

**ಹಾರೋಣ ಬಾ ಗೆಳೆಯ! ಅರಿವಿನಾಗಸದಲ್ಲಿ**
**ತೂರೋಣ ಆಸೆಗಳ ಕನಸ ಕಳೆಯುತಲಿ**
**ಮರೆಯೋಣ ಭಾರಗಳ ಹರಡೋಣ ಹಗುರಗಳ**
**ಸೇರೋಣ ಜಗದಿರವ ನಲಿವನುತ್ತುತಲಿ**

**03/05/2014**

## 37. ಮಳೆಯಾರ್ಭಟ

ಮಲೆನಾಡಿನ ವಿಸ್ತಾರದ ಹಸಿರಿನ
ಬನಸೆರಗಿನ ಗಿರಿಹರಹಿನಲಿ
ಮಳೆಯಾರ್ಭಟದಾ ತಾಂಡವನಟನೆಯ
ನೋಡಿರಿ ಕುಣಿಯುತಲಾಡುತಲಿ
ಪಡುವಣ ದಿಶೆಯೆಡೆ ಕಣ್ಣೋಡೆ;
ಓಡುತಲಿಹ ಮೋಡವ ನೋಡೆ
ನಡುಹಗಲಲೆ ನಟ್ಟಿರುಳಾವರಿಸಿದೆ;
ಕೋಲ್ಮಿಂಚಿನ ಬೆಳಕೆರೆಯುತಿದೆ

ಜಲಧಾರೆಯು ಭೋರ್ಗರೆದಿದೆ, ನೊರೆನೊರೆ–
ಯುರುಳಿವೆ ಕರಿಗಲ್ಲಿನ ಮೇಲೆ
ಕೆಳಗುರುಳಿಹ ಮರದಿಮ್ಮಿಗಳೆಲ್ಲವು
ಕೆನ್ನೀರಿನ ಹೊಳೆ ಮೇಲ್‌ತೇಲೆ
ಮುಳುಗತಲೇಳುತಲೀಜುತಿವೆ;
ಅಣೆಕಟ್ಟೊಳು ತಲೆಯೆತ್ತುತಿವೆ
ಕಡಗೋಲಲಿ ಕಡೆದಂತಾಗುತಿದೆ;
ಮಣ್ಣಿನ ಕಣಗಳು ಕುಣಿಯುತಿವೆ

ಹೊಳೆಯಿಕ್ಕೆಡೆಗಳ ಗದ್ದೆಯ ತಳದಲಿ
ಮಣ್ಣಿನ ಬೆಣ್ಣೆಯದಂಟುತಿದೆ
ಬತ್ತದ ಸಸಿಗಳು ನೆಲದಲಿ ಮಲಗಿವೆ,
ಜಲದೇವಿಗೆ ಶರಣಾಗುತಿವೆ
ರಸ್ತೆಗಳೆಲ್ಲವು ಹಳ್ಳಗಳಾಗಿವೆ;
ಕೆರೆಗಳ ದಂಡೆಗಳೊಡೆಯುತಿವೆ
ತೀರವ ಕಾಣದ ಕಡಲಂತಾಗಿವೆ,
ಮೇರೆಗಳೆಲ್ಲವು ಮುರಿಯುತಿವೆ

ಭಾವಾವೇಶದಿ ಮಳೆಸುರಿಯುತಿದೆ;
ಛಂದಃಪ್ರಾಸವ ಮೀರುತಿದೆ
ನಾಕವ ಬಿಟ್ಟು ನೆಲಕ್ಕೆ ಜಿಗಿದಿಹ
ಮದನಾರಿಯ ಹಾಗೆ ತೋರುತಿದೆ

**12/05/2014**

## 38. ಬಾ ಇಲ್ಲಿ, ಓ ಮನವೆ!

ವ್ಯೋಮದಲಿ ತೇಲುತಿಹ ಓ ಮನವೆ! ಬಾ ಇಲ್ಲಿ
ಭೂಮಿಯನು ಪ್ರೀತಿಸುತ ಬೆವರಮಳೆ ಸುರಿಸು
ಮಮಕಾರಸಾರವನು ಮಣ್ಣೊಳಗೆ ಹದಗೊಳಿಸು
ಸಮಚಿತ್ತವನು ಬಿತ್ತಿ ಸಹನೆಯನು ಬೆಳೆಸು

ಅತಿಯಾದ ಆಸೆಯಲಿ ಅಲೆಯದಿರು ಆಗಸದಿ
ಮಿತಗೊಳಿಸಿ ವೇಗವನು ಸನಿಹದಲಿ ನೆಲೆಸು
ಮತಿಯು ಮಥಿಸಿದ ಮಾತ ಪಥದಲ್ಲಿ ನೀ ಚಲಿಸು
ನತವಾಗಿ ಗಮನವನು ಋತದೊಳಗೆ ಇರಿಸು

ಛಂದಶ್ಶರೀರಗಳ ಅನುಬಂಧದೊಳ ಹೊಕ್ಕು
ಸೌಂದರ್ಯಸಮಹಿತದ ರಸದಿ ಸಂಭವಿಸು
ಚಂದಿರನ ಕಾಂತಿಯನು ತನುಮಂದಿರದಲಿಳಿಸು
ಮಂದಹಾಸವನಿರಿಸಿ ಮೊಗವ ಸಿಂಗರಿಸು

ಮದಭಾರಮೋಹಗಳ ಭಾವದೊಳು ತೂರಿಬಿಡು
ಪದಮಹಾಪೂರದಲಿ ಶುಚಿಯಾಗಿ ಬರಲಿ
ಸದಭಿರುಚಿಕಣವೊಂದು ಮಧುವಾಗಿ ಮಾರ್ಪಡಲಿ
ಹೃದಯಕುಸುಮದ ಹನಿಗೆ ಸೆಲೆಯಾಗಿ ನಿಲಲಿ

**16/05/2014**

## 39. ಬಾ ಕನಸೆ!

ಬಾ ಕನಸೆ! ಕುಣಿದಾಡು ಬಣ್ಣದೋಕುಳಿಯಾಡು
ಹೃದಯನವರಂಗದಾ ಕಿರುತೆರೆಯ ಮೇಲೆ
ಅರೆತುಂಬಿ ತುಳುಕಾಡುತಿರುವ ಮತಿಯನು ತುಂಬು
ನಿದ್ರೆಯೊಳು ತೆರೆಯುತಲಿ ನನಗೊಂದು ಶಾಲೆ

ನೀನಾಡುವಾ ಆಟ ನನಗಾಗುತಿರೆ ಪಾಠ
ಭಾವಪೂರ್ಣತೆಯೊಳಗೆ ಹರಿಯುವೆನು ನಾನು
ಎಚ್ಚರದಿ ನಿಲುಕದಾ ಆಗಸವ ಮುಟ್ಟುವೆನು
ಅರಿವಿನಗಲಾಳಗಳನರಿತು ಚಲಿಸುವೆನು

ಆಸೆಗಳ ಕಡಲಿನಾ ತೀರದೊಳು ನಿಲಿಸೆನ್ನ
ಸುಖದುಃಖದಲೆಗಳಿಗೆ  ಸಾಕ್ಷಿಯಾ ಹಾಗೆ
ಕರುಣಿಸೆನ್ನಯ ಮನಕೆ ಒಳಗಣ್ಣ ನೋಟವನು
ನಿನ್ನಾಟದೃಶ್ಯಗಳ ನೋಡುವಾ ಹಾಗೆ

ಕರ್ಮಫಲಗಳ ತೊಟ್ಟು ಕಳಚಿ ಬೀಳಲಿ ಬೇಗ
ಓದಿನಾ ಫಲಿತಾಂಶವದು ಶೂನ್ಯವಾಗೆ
ಪೂರ್ಣತೆಯ ಪಾಠವನು ಕಲಿಸುತಲಿ ಕರಗೆನ್ನ
ನಿತ್ಯಮುಕ್ತಾನುಭವದಾನಂದದೊಳಗೆ

**23/05/2014**

## 40. ಬಾ, ವನದೇವಿ!

ಒಂದು ದಿನ ತನುವಳಿದು ನೆಲಕುರುಳಿ ಮಣ್ಣಾಗಿ
ಕಣ್ಣ ನೋಟವು ಕಳಚಿ ಕಾಣೆಯಾಗೆ
ಹೇಗೆ ನೋಡಲಿ ಅಂದು ವನದೇವಿ! ನಿನ ಸೊಬಗ
ಈಗಲೇ ಬಾ ಎನ್ನ ಎದೆಗೂಡಿಗೆ

ಹಸಿರನುಸಿರಲಿ ತುಂಬಿ ಕುಣಿಕುಣಿದು ನಲಿದಾಡು
ಉಲ್ಲಾಸರಸವುಕ್ಕಿ ಚಿಮ್ಮುವಂತೆ
ಕಣಕಣದಿ ಸಂಚರಿಸಿ ಪ್ರೇಮದಂಕುರವಿರಿಸಿ
ಅಡಿಯಿಂದ ಮುಡಿಗೇರು ಬಳ್ಳಿಯಂತೆ

ಭಾವಲತೆಗಳು ಚಿಗುರಿ ನಳನಳಿಪ ಪೂವಿಡಲಿ
ಬಾಳ ಹಾದಿಯ ತುಂಬ ಘಮಿಸುತಿರಲಿ
ಸುಖದುಃಖದೊಳಹೊಕ್ಕು ಸಮಚಿತ್ತವೀಯುತಲಿ
ಮತಿಯ ಮಾತಿನ ತುದಿಗೆ ಫಲವನಡಲಿ

ಅನುಭವವು ಹಣ್ಣಾಗಿ ತನುಭಾವವಳಿಯುತಿರೆ
ನಿತ್ಯಮುಕ್ತತೆಯರಿವು ಹರಿವಾಗಲಿ
ಮನದಾಳದೊಳು ಹೂತ ಕೃತಕರ್ಮದುಳಿಕೆಗಳು
ಕೆಳಕುದುರಿ ನಿನ್ನಡಿಯ ಹುಡಿಯಾಗಲಿ

**01/06/2014**

## 41. ಕಾಗೆ

ಎಲೆ ಕರಿಯ ಕಾಗೆ! ಕರಮುಗಿವೆ ನನಗೆ
ಅರಿವೊಂದ ನೀಡು ಬಾ ಎನಗೆ
ಕತ್ತಲೆಯ ಹೀರಿ ಬೆಳಕ ಬಳಿ ಕರೆದು
ಮಲಗಿದವನೆಬ್ಬಿಸುವ ಹಾಗೆ

ಎದೆಯೊಳಗೆ ಹಬ್ಬಿ ತನುಮನವ ತಬ್ಬಿ
ಮೆರೆಯುತಿರೆ ನಿದಿರೆಯಾ ತಮವು
ಕಾ ಎಂದು ಕೂಗಿ ಎಚ್ಚರಿಸಿ ಎನ್ನ
ತೋರುತಿರೆ ಹಗಲ –ನೀನೆ ಗುರುವು

ಒಲೆಯಮೇಲೆಸರ  ಗಡಿಗೆಯನು ಇರಿಸಿ
ಬಾಗುತಿರೆ ನನ್ನೊಳಗ ಬುದ್ಧಿ
ಮನೆಯ ಮೇಲೆರಗಿ ನೆಂಟರನು ಕರೆದು
ತಿಳಿಸುತಿಹೆ ಬರುವಿಕೆಯ ಸುದ್ದಿ

ನೀನರದ ಊರ ಹೆಸರೊಂದ ಹೇಳು
ಇದ್ದರದೆ ಬುವಿಗಿಳಿದ ನರಕ
ಪರಿಸರದ ಮಲಿನವೆಲ್ಲವನು ಕಳೆವ
ನೀನರಲು ಅದೆ ನಮಗೆ ನಾಕ

ನಿನ್ನೊಳಗ ಭಾವಪೂರ್ಣತೆಯ ದನಿಯು
ಎನ್ನೆದೆಯ ಸೋಕೆ ನಾ ಧನ್ಯ
ನೀನತ್ತ ವರಕೆ ವರ್ಣಗಳು ಚಲಿಸೆ
ನಾನೊಬ್ಬ ಸರ್ವಸಾಮಾನ್ಯ

**14/06/2014**

## 42. ಸಲಹಲೆಮ್ಮ ಬನಗಳು

ಉಸಿರುಸಿರಲಿ ನುಸುಳುತಿರಲಿ
ಹಸಿರೆಲೆಗಳ ಹೊಸತನ
ನಸುನಗುಗಳ ಸುಮವರಳಿಸಿ
ಬೆಸೆಯುತಿರಲಿ ಗೆಳೆತನ

ಬನಬನದಲಿ ಮಧುಕರಗಳು
ಪ್ರಣವನಾದಗೈಯಲಿ
ವನಕವಿಗಳು ಸಭೆಸೇರಲಿ
ಇನಿದನಿಯಲಿ ಹಾಡಲಿ

ಜಲಧಿಯೊಲವು ಮೇಲಕೇರಿ
ಸಾಲುಗಟ್ಟಿ ನಿಲ್ಲಲಿ
ನೀಲ ಬಾನಿನಂಗಳದಲಿ
ಕಲೆಯ ಬಣ್ಣವೂಡಲಿ

ಮಳೆಸುರಿಯಲಿ ಹೊಳೆ ಹರಿಯಲಿ
ಹೊಲಗಳು ತೆನೆಗೂಡಲಿ
ಇಳೆಯಾಳದಲಿಳಿದ ಜಲವು
ಬೆಳೆಯ ಬೇರಿಗೇರಲಿ

ಕಲೆಯರಳಿಸಿ ಕಣ್ತುಂಬಲಿ
ಸಲಹುತಿರಲಿ ಬನಗಳು
ನಲಿವರಳಿಸಿ ನೋವಡಗಿಸಿ
ಬಲತುಂಬಲಿ ಬಾಳೊಳು

**15/06/2014**

## 43. ಆಟ–ಪಾಠ

ಅಂಗಳಕಿಳಿದು ಆಡುತಲಿದ್ದರು
ಬಾಲಕರೆಲ್ಲರು ಒಂದಾಗಿ
ನೋಡುವ ಮನಗಳು ಆಗಸವೇರಿ
ತೇಲುತಲಿದ್ದವು ಹಗುರಾಗಿ

ಗೋಣಿಯ ದಾರವ ಬುಗುರಿಗೆ ಸುತ್ತಿ
ತಿರುಗಿಸಿ ಬಿಡುತಿರೆ ಜೋರಾಗಿ
ಎದೆಯೊಳಗವಿತಿಹ ನೋವುಗಳೆಲ್ಲವು
ಹೊರಕ್ಕೆ ಬರುವುವು ಸುಖವಾಗಿ

ಐದಾರುಂಡಾ.. ಅರಪತಿಗಾಜ...
ಏಳಂಬೇಳೆ... ಎಂಟ್ ಮನೆ ಶುಂಠಿ...
ಒಂಬೈಗೋಲ... ತೇದಿಕು ತೇಲ..
ಎನ್ನುತ ಗೋಲಿಯನಾಡುತಿರೆ

ಲಾಭವ ಚಿಂತಿಪ ಲೋಭಿಗಳೆಲ್ಲರ
ಲೆಕ್ಕಗಳೆಲ್ಲವು ಮರೆಯಾಗಿ
ಆಟದ ಗೋಲಿಗಳೊಂದಿಗೆ ಬೆರೆತವು
ಓಟಕೆ ಸಹಪಾಠಿಗಳಾಗಿ

ಎಲ್ಲಾ ಮಕ್ಕಳು ನಲಿಯುತಲಾಡೆ
ಮನೆಯಂಗಳದಲಿ ಒಗ್ಗೂಡಿ
ದೊಡ್ಡವರೆಲ್ಲರು ಜಗಲಿಯನೇರಿ
ಕಲಿಯುತಲಿರಲಾಟವ ನೋಡಿ

**ಹಾರುವ ಆಟ ಓಡುವ ಆಟ**
**ಪೇರಲೆ ಮರವನು ಏರುವ ಆಟ**
**ಕೂರುವ ಆಟ ನಿಲ್ಲುವ ಆಟ**
**ಸಾರಲಿ ಜೀವನ ಕಲೆಯಾಟ**

**29/06/2014**

## 44. ಕನ್ನಡನುಡಿ

ಕನ್ನಡನುಡಿಯೆನ್ನೆದೆಯೊಳ
ಮಣ್ಣಲಿ ಹಸಿರಿನ ಕುಡಿಯೊಡೆದು
ಚೆನ್ನುಡಿಗಳ ಹನಿಹಾಲ್ದೆನೆಗೂಡಲಿ
ಹೊನ್ನಿನ ಹೊಳಪಿನ ಮೈದಳೆದು

ಮುದನೀಡುವ ಪದಬಂಧಗಳೆನ್ನಯ
ಹೃದಯಪ್ರಾಣದ ಕಣವಾಗಿ
ಮೃದುಗತಿಯಲಿ ಶಿವಸದನದ್ವಾರದ
ಕದ ತೆರೆಯಲಿ ಕಲರವವಾಗಿ

ಸುಂದರ ಪಥಸಂಚಲನವ ಗೈಯಲಿ
ಚಂದಿರ ಮನದಿಂ ತಾ ಚಲಿಸಿ
ಬಂಧುರಪದಜಲಗಂಗಾಪಾತದ
ಛಂದಃಪ್ರಾಸವವನನುಸರಿಸಿ

ಕಿವಿಗಿಂಪಿನ ಸಂಗೀತವನೆರೆಯಲಿ
ಸವಿಯೂಡಿದ ನುಡಿಪೆಂಪಿನಲಿ
ಕವಿಕೋಕಿಲ ಕಲಕಂಠದೊಳಿಳಿಯಲಿ
ನವರಸಭಾವವ ಹೊಮ್ಮಿಸಲಿ.

**03/07/2014**

## 45. ಆಸೆ

ಬೈಗುಗೆಂಪಿನ ಚೆಲುವಿನಾಗಸದ ಕೆಳಗಿಳಿದು
ಸಾಗರದಿ ಮುಳುಗುತಿಹ ರವಿಯಾಗುವಾಸೆ
ರಾಗರಂಜಿತಭಾವಸಂಸ್ಕಾರಪದಗಳಲಿ
ಬಾಗುತಿಹ ಬಣ್ಣಗಳ ಪ್ರತಿಫಲಿಸುವಾಸೆ

ಮೂಡಣದ ಹೊಂಗಿರಣವೋಡೋಡಿ ಬರುವಾಗ
ಸಡಗರದಿ ನಭವೇರಿ ಹಾರಾಡುವಾಸೆ
ನಾಡ ಕನ್ನಡವಾಗಿ ಜನಮನದ ದನಿಯಾಗಿ
ಹಾಡಿಗನ ಪಡೆನುಡಿಯ ನಡೆಯಾಗುವಾಸೆ

ಮರಮರದಿ ಚಿಮ್ಮುತಿಹ ಚಿಗುರುಗಳಲಲ್ಲಿ
ಉರದ ಕೆಂಪಿನ ಒಲವನಿರಿಸುವಾ ಆಸೆ
ಗಿರಿತಲದ ಹೊನಲುಗಳ ಹರಿವಾಗಿ ಹಾಲ್ಗರೆದು
ನೊರೆಯ ನಗುವಿನಲೊಮ್ಮೆ ಕರಗುವಾ ಆಸೆ

ಬಾನೇರಿ ಮೇಘತನುವಾಗಿ ಇಳೆಯೆಡೆ ಬಾಗಿ
ವನದೇವಿಗಭಿಷೇಕಜಲವಾಗುವಾಸೆ
ಅಣುರೇಣುತೃಣಕಾಷ್ಠಬಂಧಗಳಲೊಂದಾಗಿ
ಕಣಕಣದಲಾನಂದಘನವಾಗುವಾಸೆ

**13/07/2014**

## 46. ಮಸಾಲೆ ಪೂರಿ!

ಮನೆಮನೆ ಬಚ್ಚಲ ರೊಚ್ಚದು ನಿಂತಿರೆ
ಚರಂಡಿಯೊಳಗಿನ ಹೊಂಡದಲಿ
ಡಬ್ಬದ ತಗಡುಗಳಂದದ ಗಾಡಿಯು
ನಿಂತಿರಲದರಾ ಪಕ್ಕದಲಿ
ಮಸಾಲೆಪೂರಿಯ ಸಾರವಿದೆ;
ರೊಚ್ಚಿನ ತೀಕ್ಷ್ಣತೆಯಳಿಯುತಿದೆ

ದೇವರಗುಡಿಗೋಪುರದಡಿಯಲಿ
ಸಂಜೆಯ ಘಂಟಾನಾದವಿರೆ
ಅರ್ಚನೆಗೈದಿಹ ಭಕ್ತರ ಕಂಗಳು
ಅತ್ತಿತ್ತಲುಗುತಲೋಡುತಿರೆ
ಗಲ್ಲಿಯೊಳಲೆಯುತಲಲ್ಲಲ್ಲೇನಿವೆ;
ಎಲ್ಲವನರಿಯುವ ಆಸೆಯಿರೆ

ಪೂರಿಗಳಾರನು ತಟ್ಟೆಯೊಳಿಟ್ಟು
ಮುರಿಯುವ ಸದ್ದದು ಕೇಳುತಿರೆ
ಕಿವಿಗಳು ಮೊರದಂತಾಗುವುವು;
ಮೂಗಿನ ಹೊಳ್ಳೆಗಳರಳುವುವು
ಪಂಚೇಂದ್ರಿಯಗಳು ನಾಲಗೆಯಂಚಲಿ
ಒಗ್ಗಟ್ಟಿನ ಸಭೆ ಸೇರುವುವು

ಮಸಾಲೆಪೂರಿಯ ತಿನ್ನುವ ಕ್ಷಣದಾ–
ನಂದದ ಕ್ಷಣಗಳನೆಣಿಸುತಲಿ
ಬಾಳಲಿ ಬಂದಿಹ ಬವಣೆಗಳೆಲ್ಲವ
ನೊಮ್ಮೆಲೆ ಹೊರಗೊಗೆಯುತಲಿ
ಕಾಲ್ಗಳು ಸರಸರವೋಡುವುವು;
ಗಾಡಿಯ ಸನಿಹವ ತಲುಪುವುವು

ಬಿಸಿ ಮಸಾಲೆಯ ದ್ರಾವಣದಲ್ಲಾ–
ಪೂರಿಗಳೊಳಮ್ಮೆ ತುಂಬುತಿರೆ
ಚಾಚಿದ ಕರಗಳ ಸರದಿಯನೆಣಿಸುತ
“ತಗೊಳ್ಳಿ” ಎಂಬಾಹ್ವಾನವಿರೆ
ಸ್ವರ್ಗದ ಬಾಗಿಲು ತೆರೆದಂತೆ
ಪಾಪದ ಲೆಕ್ಕಗಳಳಿದಂತೆ

ಬಚ್ಚಲ ರೊಚ್ಚಿನ ವಾಸನೆಯೊಂದಿಗೆ
ಪಾನಿಯ ಘಮಘಮವೂಡಿರಲು
ಸುಖದುಃಖಗಳಲಿ ಸಮತೆಯ ಸಾರುವ
ಕೆಚ್ಚೆದೆಯಂಗಡಿಯಲ್ಲಿರಲು
ಮಕ್ಕಳು, ಮುದುಕರು, ನಾರೀಮಣಿಗಳು,
ಯುವಕರು ಗುಂಪಲಿ ಕೂಡಿರಲು

ಬನ್ನಿರಿ, ತಿನ್ನಿರಿ ಮಸಾಲೆಪೂರಿಯ
ಎನ್ನುವುದೊಂದೇ ಕೂಗಿರಲು
ದೈವವು ಮಾಯಾಜಾಲವ ಹೆಣೆದಿದೆ
ಪೂರೀವಾಲನ ನೇಮಿಸಿದೆ
ಲೀಲಾಜಾಲದೊಳೆಲ್ಲರ ಮನಗಳ
ಸೆಳೆಯುತ ಕುಣಿಸುತಲಾಡಿಸಿದೆ
ಎಲ್ಲರನೊಂದೆಡೆಗೂಡಿಸಿದೆ

**20/07/2014**

## 47. ಚಾನ್ದನಿ

ನಾನಿಲ್ಲದಿದ್ದರೂ ಬಾನಿಹುದು ನೋಡ
ತಾನನದ ದನಿಯಿಹುದು ಎಲ್ಲೆಲ್ಲೂ ಕೇಳ

ನಾಳೆಗಳ ಎಣಿಕೆಯಲಿ ಈ ಕ್ಷಣವ ಮರೆತರೂ
ಕಾಲತಾಳಕೆ ಮಳೆಯು ಸುರಿಯುವಂತೆ
ಜಲಮೂಲಗಳಿಗೆಲ್ಲ ವಿಷವುಣಿಸುತಿದ್ದರೂ
ಇಳೆಯೆಡೆಗೆ ನೀರದನು ಜಾರುವಂತೆ

ತಾರೆಗಳ ತೋಟಕ್ಕೆ ಮೇರೆಯಿರದಿದ್ದರೂ
ಯಾರೊ ನಿಂತೆಲ್ಲವನು ಕಾಯುವಂತೆ
ಆ ರವಿಯ ಕಿರಣಗಳು ಸರಿಗಮದ ನಡೆಗೂಡಿ
ಸ್ವರದ ಭಾವಕೆ ಬಳುಕಿ ಬಾಗುವಂತೆ

ಇದೆ ನೋಡು ಈ ಜಗವು ಲಯಬದ್ಧ ಹಾಡಂತೆ
ಪದವೊಂದು ಅಂಕುರಿಸಿ ಬೆಳೆದು ಬೆಳೆದು
ಎದೆಯುಸಿರ ತಾ ತುಳಿದು ಬಾನಗಲ ಸಂಚರಿಸಿ
ನಾದದಲೆಯಲಿ ತೇಲಿ ನಲಿಯುತಿಹುದು

**21/07/2014**

## 48. ಲಲಿತೆ!

ರಸನದೊಳಗೆ ಬಾರೆ ಲಲಿತೆ!
ಲಾಸ್ಯಪದಗಳಿರಿಸುತ
ಹೊಸ ಹರುಷವ ತಾರೆ ಸವಿತೆ!
ರಸಭಾವವ ಸ್ಫುರಿಸುತ

ಮಾತ ಮಥಿಸಿ ಬೆಣ್ಣೆಯಂಥ
ಮಿತಪದಗಳ ಕುಣಿಸುತ
ಋತದೊಳೆನ್ನ ಮತಿಯನರಿಸಿ
ಗತಿಯ ತೋರಿ ಹರಸುತ

ಬನದ ಚೆಲುವ, ಹೊನಲ ನಲಿವ
ಮನದಲೆಯಲಿ ತೇಲಿಸಿ
ಮೌನದಗಲ ರಿಂಗಣವನು
ಕಣಕಣಗಳಲೂಡಿಸಿ

ಬಿಂದುಮೂಲದಕ್ಷರವನು
ಬಾನ್ದನಿಯಲಿ ಬಾಗಿಸಿ
ಸೌಂದರ್ಯಸಮಾಧಿಯೊಳು
ಬಂಧಮುಕ್ತವಾಗಿಸಿ

ಪ್ರತಿಯುಸಿರಿನ ತಾಳಗತಿಯ
ಪ್ರತಿಪದಗಳಲಾಡುತ
ಪ್ರತಿಬಿಂಬಿತ ಕಾವ್ಯಗಳಲಿ
ಪ್ರತಿರೂಪವ ತಾಳುತ

**ಬಾರೆ ಪ್ರಕೃತಿಮಾತೆ! ಲಲಿತೆ!**
**ಆರು ಕಮಲವರಳಿಸಿ**
**ತಾರೆ ವರ್ಣವರ್ಣಗಳನು**
**ಸಾರಪೂರ್ಣವಾಗಿಸಿ.**

**22/07/2014**

## 49. ಭಾವೈಕ್ಯ

ಉಚ್ಚರಿಸಿದಕ್ಷರದಿ ಸಂಚರಿಸು ಕ್ಷಣವೆ!
ಎಚ್ಚರವನೆಚ್ಚರಿಪ ಪದವಿರಿಸು, ಮನವೆ!

ಕಾಮಿಗಳು, ಕ್ರೋಧಿಗಳು, ಕಡು ಲೋಭಿಗಳೆ ಇರಲಿ
ಮೋಹಮದಮತ್ಸರಗಳವತಾರವೆತ್ತಿರಲಿ
ಭವರೋಗಭೋಗಾದಿ ಭಂಡಾರಖಣಿಯಿರಲಿ
ಸುಖದುಃಖಸಾಗರದೊಳೇರಿಳಿತದಲೆಯಿರಲಿ

ಸಂಘಟನಚತುರಾತ್ಮಚೈತನಪದಕೆ
ನೈವೇದ್ಯದಂತೆಲ್ಲವನರ್ಪಿಸುತಿರದಕೆ

ಶರಣಾಗಿ ಹಗುರಾಗಿ ನೀ ಜಗದಗಲವಾಗಿ
ಮೌನಘನದಾನಂದದೇಕರಸವಾಗಿ;
ಸೃಷ್ಟಿಕಾವ್ಯದ ವರ್ಣವೈವಿಧ್ಯತರುವಾಗಿ
ಹರಿದ್ವರ್ಣದುಸಿರಿನೊಳು ನೀನೈಕ್ಯವಾಗಿ;

ವಿಶ್ವಪ್ರಬಂಧದೊಳು ಅಕ್ಷರಗಳಂದದಲಿ
ಛಂದಃಪ್ರಾಸಗಳ ಗತಿಯು ನೀನಾಗು
ನಿಯತದಲಿ ನೀ ಭ್ರಮಿಸಿ ಎಲ್ಲದರಲವತರಿಸಿ
ಹೃದಯದಲಿ ಒಂದಾಗಿ ಭಾವೈಕ್ಯವಾಗು.

**25/07/2014**

## 50. ಮಳೆ

ಕಾರ್ಮೋಡಗಳೋಡೋಡುತ ಬರುತಿವೆ,
ಮಲೆನಾಡಿನ ದಟ್ಟಡವಿಯ ನೋಡಿ
ಕಡಲಲೆಯುಬ್ಬರವೆಲ್ಲವನೆಳೆದೆಳೆ–
ದಾಡುತಲಬ್ಬರದೊಡಗೂಡಿ

ಹೆಮ್ಮರಗಳು ಜಿಗಿದಾಡುತಿವೆ;
ಗಿಡಗಳು, ದಡಿಗಳು ಬಾಗುತಿವೆ
ಜಡಿಮಳೆಯಾರ್ಭಟತಾಂಡವನಟನೆಯ
ನೀರಾಟಕೆ ತಲೆಯೊಡ್ಡುತಿವೆ

ಚಂಡಾಕಾರದಿ ಬೀಸುವ ಗಾಳಿಗೆ
ಮರಗಳ ಹರೆಗಳು ಮುರಿಯುತಿವೆ
ಹಸಿರೆಲೆಗಳು ನುಜ್ಜಾಗುತಲುದುರಿವೆ,
ಹರಿಯುವ ನೀರಲಿ ತೇಲುತಿವೆ

ಕೆಮ್ಮಣ್ಣ ಕಣಗಳೊಡೆಯುತಿವೆ;
ಹೊನಲಿಗೆ ಸೀರೆಯನುಡಿಸುತಿವೆ
ಹಸಿರೆಲೆಪುಡಿಗಳು ಹೊಳೆಯುಡುಗೆಯ ಹೊಸ
ಮೆರುಗಿನ ಚಿತ್ರಗಳಾಗುತಿವೆ

ಭೋರ್ಗರೆಯುತ ಜಿಗಿದಿರೆ ನೀರ್ಕೋಡಿ,
ಕಾರ್ಗಲ್ಲಿನ ಶಿವನೆಡೆಗೋಡಿ
ಬೆಳ್ನೊರೆ ನಗುಮೊಗವುಕ್ಕಿಹ ಗಂಗೆಯು
ಅವತರಿಸಿಹಳಲ್ಲಿಯೆ ನೋಡಿ

ಆಹಾ! ಮಳೆ! ಮಳೆ! ಬಿರುಗಾಳಿ;
ಸುಂಯ್ ಗುಡುತಿರಲಾ ಚಳಿಗಾಳಿ
ಹಕ್ಕಿಗಳೆಲ್ಲವು ಗೂಡನು ಸೇರಿವೆ,
ಕಪ್ಪೆಗಳವು ವಟಗುಟ್ಟುತಿವೆ

ಮುದುರಿದ ಕೈಕಾಲದುರುತಿವೆ;
ಕಂಬಳಿಯೆಳೆದಾಡುತಿವೆ
ಕೋಣೆಯೊಳಡಗಿಹ ಮಕ್ಕಳ ಕೈಗಳು
ಹಪ್ಪಳದಂಚನು ಮುರಿಯುತಿವೆ

ಮಲೆನಾಡಿನ ಮಳೆಗಾಲವು ಇಂತಿರೆ,
ಎಲ್ಲವೂ ಪ್ರತಿಮೆಗಳಾಗುತಿರೆ
ಹಸಿರುಡೆಗಳನುಟ್ಟಂತಿಹ ಹೊಲಗಳ ಬಸಿರಲಿ
ಮೊಳಕೆಗಳೊಡೆಯುತಿರೆ

ಬಗೆಬಗೆ ರೂಪದಿ ಪ್ರಕೃತಿಯಲಿ,
ಮೈಮನಗಳ ಲಯಗೊಳಿಸುತಲಿ
ಶ್ರಾವಣಮಾಸದ ಹಬ್ಬದ ಪೂಜೆಗೆ
ಹರುಷದಲೆಲ್ಲವನರ್ಪಿಸಲಿ

**02/08/2014**

## 51. ಸೋಲೇ ಗೆಲುವಿನ ಸೋಪಾನ

ಸೋಲೇ ಗೆಲುವಿನ ಸೋಪಾನ
ಬಾಳೊಳು ಅದುವೇ ಸಂಮಾನ

ಅಡಿಗಡಿಗೆಡುವುತ ಮುನ್ನಡಿಯಿಟ್ಟರೂ
ನಡತೆಯು ಒಳಿತಿರಲವ ಜಾಣ
ಗಡಿಬಿಡಿಯಿಂದಲಿ ತಡವರಿಸಿದರೂ
ನುಡಿಗಳು ಶುಚಿಯಿರಲದೆ ಮಾನ

ಮದ್ಯದ ಅಮಲಲಿ ಪದಗಳನಾಡುತ
ವಿದ್ಯೆಯ ಬೋಧಿಸೆ ಅವಮಾನ
ಗದ್ದಲ ತುಂಬಿರೆ ಮನಸಿನ ಆಳದಿ
ಬುದ್ಧಿಯಿರುವುದೇ ಅನುಮಾನ

ಬಿದ್ದವನೇಳದೆ ಮಲಗಿಯೆ ಇದ್ದರೆ
ಸದ್ಯವೆ ಸೋಲಿದೆ ತಿಳಿ ಜಾಣ
ಬಿದ್ದವನೇಳುತ ಗೆಲುವೆಡೆಗಡಿಯಿಡೆ
ಬುದ್ಧನ ಪದವಿಗೆ ಸೋಪಾನ

05/07/2014

## 52. ಝೇಂಕಾರ

ಹೂವಿನಧರದ ಮಧುವು ಜಾರಿ ಹೋಗದ ಹಾಗೆ
ಹೀರಲಾತುರ ತೋರಿ ಹಾರುತಿರೆ ದುಂಬಿ
ಹೃದಯಕುಸುಮದ ಜೇನ ಚಿತ್ತಭ್ರಮರವು ಬಯಸಿ
ಝೇಂಕರಿಸಿ ಹಾಡುತಿದೆ ಎದೆಯ ತುಂಬಿ

ಭಾವವದು ಬಾನಗಲ ಬಾಗಿ ತಾ ಬಿಲ್ಲಾಗಿ
ಸಪ್ತವರ್ಣಗಳಾಗಿ ಚಿತ್ರವಾಗೆ
ಓಂಕಾರನಾದಾಂತ್ಯದಕ್ಷರಾಲಿಂಗನಕೆ
ರಸನದಿಂ ಪದಗಳಭಿಷೇಕವಾಗೆ

ಸಪ್ತಾಗ್ನಿಜಿಹ್ವೆಗಳಲಾ ವಾಣಿ ಪ್ರಜ್ವಲಿಸಿ
ಕಣಕಣದಲನುರಣಿಸಿ ಗೀತವಾಗೆ
ಸೃಷ್ಟಿಯಾನಂದರಸಪರಿಪಾಕಪೂರ್ಣತೆಯ
ಸಂಕಲ್ಪಸಂಚಾರದಾಲಾಪವಾಗೆ

ಆಕಾಶದಾದ್ಯಂತ ಮಧ್ಯಾಂತರಾಲದೊಳು
ಭಾವವರ್ಣವು ಕಮಲದಲಗಳಾಗೆ
ಸುಮನಾಲದಾಂತರ್ಯ ಮಧುರಸಾಸ್ವಾದನೆಯು
ಚಿತ್ತಷಟ್ಪದದಿಷ್ಟವೃತ್ತಿಯಾಗೆ

**21/09/2014**

## 53. ಹಬ್ಬಗಳಾವಳಿ

ಆಹಾ! ಬಂದಿತು ಹಬ್ಬಗಳಾವಳಿ;
ಮನೆಮನೆಯಲಿ ಸಂಭ್ರಮಕೇಲಿ
ಅಡುಗೆಯ ಪಾತ್ರೆಗಳಾಡುತಿರೋಕುಳಿ;
ವಿಧವಿಧಷಡ್ರಸಪಾಕದಲಿ
ಮನವಿರೆ ಯೋಗಸಮಾಧಿಯಲಿ;
ಸವಿ ಭೋಜನಸಂಸಿದ್ಧಿಯಲಿ
ಪಂಚೇಂದ್ರಿಯಗಳು ಒಂದೆಡೆಗೂಡಿವೆ;
ಒಬ್ಬಟ್ಟಿನ ರುಚಿಕಟ್ಟಿನಲಿ

ಸಾರೊಳಗದ್ದಿಹ ಸೌಟಿನ ಸದ್ದಿಗೆ
ಕಿವಿಗಳು ಎದ್ದೆದ್ದೇಳುತಿವೆ
ರುಚಿರುಚಿಯಡುಗೆಗಳೂಟದ ಚಪಲಕೆ
ರಸನದಿ ಜಲವೊಸರುಕ್ಕುತಿದೆ
ಹೊಟ್ಟೆಯು ಚುರುಗುಟ್ಟುತಿದೆ;
ತೇಗುವ ಕ್ಷಣಗಳನೆಣಿಸುತಿದೆ
ಉದರದೊಳಗ್ನಿಯ ಜ್ವಾಲಾಮಾಲೆಯು
ಯಾಗಸಮಾಪ್ತಿಗೆ ಕಾಯುತಿದೆ

ಅಟ್ಟದ ಮೇಲಿನ ಡಬ್ಬದೊಳಿಟ್ಟಿಹ
ಹಪ್ಪಳಗಳು ಕೆಳಗಿಳಿಯುತಿವೆ
ಕುದಿಯುವ ಎಣ್ಣೆಯ ಬಾಣಲೆಯೊಳಗಡೆ
ಮುಳುಗುತಲೇಳುತಲುಬ್ಬುತಿವೆ
ಬಾಳಕಗಳು ಗರಿಯಾಗುತಿವೆ;
ಬಾಯೊಳಗಿಳಿಯಲು ಕಾಯುತಿವೆ
ತರತರ ಹೊಸ ತರಕಾರಿಗಳೆಲ್ಲವು
ಹದದುರಿಯೊಲೆಯಲಿ ಬೇಯುತಿವೆ

ಮೊಳಕೆಗಳೊಡೆದಿಹ ಬಗೆಬಗೆ ಕಾಳ್ಗಳು
ಗಜ್ಜರಿತುರಿ ಜೊತೆಗೂಡುತಿವೆ
ಹಸಿಮೆಣಸಿನ ತುಣುಕುಗಳೊಂದಿಗೆ
ತೆಂಗಿನ ಸಂಗದೊಳಾಡುತಿವೆ
ಲಿಂಬೆಯ ರಸವನು ಹೀರುತಿವೆ;
ಸಾಸಿವೆಗಳು ಚಟಪಟಿಸುತಿವೆ
ಹಸಿ ಕೊತ್ತಂಬರಿ ಸೊಪ್ಪುಗಳಂದದಿ
ಕೋಸಂಬರಿಯನು ಚುಂಬಿಸಿವೆ

ಬಂದಿತು ಕ್ಷಣವೊಂದಿನಿತೂ ಕಾಯದೆ
ತುಪ್ಪದ ಘಮಘಮವೂಡುತಲಿ
ಅಡುಗೆಯ ಮಂಗಳವಾದ್ಯದ ಸದ್ದಿರೆ
ಸಟ್ಟುಗದೊಳಮೈಕಟ್ಟಿನಲಿ
ತಂದಿಟ್ಟಿಹ ಹೊಸ ಬಟ್ಟಲಲಿ;
ಕೈಬಾಯ್ಗಳ ಒಗ್ಗಟ್ಟಿನಲಿ
ಒಂದರ ಮೇಲೊಂದಡಿಗೆಗಳೆಲ್ಲವು
ಉದರದೊಳಿಳಿದಿವೆ ಸರದಿಯಲಿ

**04/10/2015**

## 54. ಯಜ್ಞ

ಭಾವವೇ ಬಾ ಇಲ್ಲಿ ಭವಯೋಗಿಯಾಗು
ರವವಾಗಿ ಕಲವರಿತ ಕವಿತೆಯಾಗು

ಅಗೆಯೊಳಗೆ ಬಾಗು ಕಾಳ್ದೆನೆಯಾಗಿ ನೀ ತೂಗು
ಮೊಗದ ನಗುಹೂವಿನೊಳ ಮಕರಂದವಾಗು
ಸಾಗಿ ನೀ ಸಂಸಾರಕೃಷಿಭೂಮಿಫಲದೊಳಗೆ
ಜಗದಗ್ನಿಕುಂಡದೊಳು ನೈವೇದ್ಯವಾಗು

ಮುಗಿಲಾಗಿ ಮೇಲ್ಜಿಗಿದು ಮಳೆಯಾಗಿ ಕೆಳಗಿಳಿದು
ಬಗೆಬಗೆಯ ಜಲಮೂಲಚೈತನ್ಯವಾಗು
ಜಗದಗಲ ನೀ ಹರಡಿ ಝಗಮಗಿಪ ಬೆಳಕಾಗು
ಆಗಸದ ರವಿಯುದರಕಾಂತಿಯೊಳು ಬಾಗು

ಮಣ್ಣಾಗು ತರುಮೂಲಸಾರದೊಳು ಒಂದಾಗು
ಹಣ್ಣಿನೊಳ ತಿರುಳಾಗಿ ಪರಿಪಕ್ವವಾಗು
ಕಣ್ಣಾಗು ಕಷ್ಟಸುಖದಜ್ಞಾನರಾತ್ರಿಯಲಿ
ಅನ್ನರಸಕೋಶಾಗ್ನಿಪದಕೆ ಶರಣಾಗು

ಸೃಷ್ಟಿವೈವಿಧ್ಯಮಯವರ್ಣಾಂತರಾಲವದು
ದೃಷ್ಟ್ಯಾದಿ ಕರಣಗಳ ಗುರಿಯಾಗುತಿರಲಿ
ವ್ಯಷ್ಟಿಚಿಂತಿತವಸ್ತುವಿಷಯಾಜ್ಯಹುತವಾಗಿ
ಇಷ್ಟಿಪರಿಪೂರ್ಣತೆಯ ಸಂತುಷ್ಟಿಯಿರಲಿ

**05/10/2014**

## 55. ಭೂಪ್ರಾರ್ಥನೆ

ಉತ್ತಿ ಎಮ್ಮಾಸೆಗಳ ಅಂಕುರದ ಒಳಗಿರ್ಪ
ಬತ್ತದಾ ಮಣ್ಣಿನೊಳ ಉತ್ಸಾಹಕ್ಕೆ ಶರಣು
ಅತ್ತಾಗ ತುತ್ತಿಡುವ ಸತ್ತಾಗ ಹೂತಿಡುವ
ನಿತ್ಯಪರಿಪೂರ್ಣತತ್ತ್ವಕ್ಕೆ ಶರಣು

ಓ ಭೂಮಿಮಾತೆ! ಸುಖಶಾಂತಿದಾತೆ!
ಅಭಯಪ್ರದಾತೆ!

ಆಕಾಶವಾಯ್ವಗ್ನಿಜಲಭೂತಸಂಶಕ್ತಿ
ಯುಕ್ತಾತ್ಮಚೈತನ್ಯಸತ್ಯಸಂಗೀತೆ!
ಭಕ್ತಿರಸಪರಮಾನ್ನನೈವೇದ್ಯಸಂಪ್ರೀತೆ!
ಜೀವನಿರ್ಜೀವಕುಲಕೇಕೈಕ ಮಾತೆ!

ಕಾಮಾದಿ ಷಡ್ವೈರಿ ದುಸ್ಸಂಗದಿಂದೆದ್ದ
ಮಮಕಾರಹವ್ಯಗಳನರ್ಪಿಸುವೆ ತಾಯೆ!
ತಾಮಸಿಕ ಗುಣದೋಷದಾವರಣವನು ಹರಿದು
ಸಾಮರಸಗುಣಗಳಿಂದಾವರಿಸು ತಾಯೆ!

ಆರೋಗ್ಯ ವೈರಾಗ್ಯ ಭವಯೋಗ್ಯ ಭಾಗ್ಯಗಳ
ಸಾರಥ್ಯದಿಂದಲೀ ರಥವು ಚಲಿಸುತಿರಲಿ
ಚರಯೋಗಸಂಸಿದ್ಧಭೋಗಸಂವೃದ್ಧಿಗಳು
ಪರಮಪದಸಂಬಂಧಸೂತ್ರದೊಳಗಿರಲಿ
ವರಭೂಮಿಮಾತೃಕೆಯ ಚರಣಗಳಲಿರಲಿ.

**08/10/2014**

## 56. ಸೂರ್ಯೋದಯ

ಅತ್ತ ಮುಗಿಲಲಿ ಬೆಳ್ಳಿ ಮೂಡಿತು
ಕತ್ತಲುದರವು ಸೀಳಿತು
ಮತ್ತಕೋಕಿಲಚಾರುನಿಸ್ವನ–
ವಿತ್ತ ಬುವಿಯೊಳು ಮೊಳಗಿತು

ಕಂದನೋರ್ವನು ಕಣ್ಣ ಬಿಟ್ಟನು
ಬಂದನಾ ಗಿರಿಯೋರೆಗೆ
ಅಂದಚಂದದ ರಂಗನಿತ್ತನು
ಇಂದು ನಿನ್ನೆಯ ಸಂಧಿಗೆ

ಬಾನ ಮಲ್ಲಿಗೆ ಹೂವ್ಗಳೆಲ್ಲವು
ಬನದ ಮಾಳಿಗೆಗಿಳಿಯಲು
ಮೌನಗಾನದೊಳವಿತ ತಾನಕೆ
ಹನಿಗಳಾಡುತ ಕುಣಿಯಲು

ಎಲ್ಲ ಖೇಚರಗಳಿಗೆ ಕಾತರ
ಬೆಳಕ ಹಬ್ಬದ ಸಡಗರ
ಮೇಲೆ ಹಾರುವ ದೂರ ಸಾಗುವ
ಕಾಳ ಹೆರಕುವ ಆತುರ

ಕಾಲತಾಳಕೆ ಕುಣಿವ ವಿಶ್ವದ
ಮೂಲದಲ್ಲಿರೆ ಸೂತ್ರವು
ನಾಳೆಯಾಗುವ ಸೂರ್ಯನುದಯಕೆ
ಬೆಳಕು–ಕತ್ತಲ ಗಣಿತವು

**22/10/2014**

## 57. ಯಾರವನು!?

ಆವನೋ ಬರೆಯುವನು ಪರಿಪರಿಯ ಕವಿತೆಗಳ
ಭಾವಕ್ಕೆ ತಕ್ಕ ಪದವಿನ್ಯಾಸವಿರಿಸಿ
ಆವನೋ ಕುಣಿಯುವನು ಹೃದಯನವರಂಗದಲಿ
ಜೀವತಾಳವ ತಕ್ಕ ಮೇಳದೊಳಗಿರಿಸಿ

ಕನಸುಗಳ ಲೋಕದಲಿ ಅನುದಿನವು ಅಭಿನಯಿಸಿ
ಮನದಾಳದತಿಯಾಸೆಗಳನೆಲ್ಲ ತಣಿಸಿ
ಬಾನಗಲ ಬಿತ್ತರದ ತಾನನವನೈತಂದು
ದನಿಯಾಳದಲ್ಲಿರಿಸಿ ಕಣಕಣದಿ ಗುಣಿಸಿ

ಕಾಗೆ ಕೋಗಿಲೆ ಗೂಬೆ ಗುಬ್ಬಚ್ಚಿ ಗೂಡುಗಳ
ರಾಗರಂಜಿತ ಕೂಗುಗಳನು ಸಂಕಲಿಸಿ
ಬಗೆಬಗೆಯ ಮಾತುಗಳ ಮಾಧುರ್ಯದರಳಾಗಿ
ಮೊಗವೇರಿ ಬರುತಿಹನು ನಗೆಹೂವ ಮುಡಿಸಿ

**14/12/2014**

## 58. ಪದ

ಪದಕೋಶದಿಂದ ಪ್ರತಿಯೊಂದು ಪದವೂ
ಜಿಗಿದೆದ್ದು ಬರಲಿ ಬೇಗ
ಉಸಿರಿನೊಳು ಚಲಿಸಿ ಉಲ್ಲಾಸವಿರಿಸಿ
ತರಲಿ ಬಾನ್ತುಂಬ ರಾಗ

ಕನ್ನಡದ ಮಣ್ಣ ಸಾರವನು ಸೆಳೆದು
ತೆನೆಯಾದ ಪದಗಳೆಲ್ಲ
ಅನ್ನದೊಳು ಬಂದು ಗುನುಗುನಿಸಿ ನಿಂದು
ಹಾಡಾಗಿ ತೇಲಲೆಲ್ಲ

ಆ ಬಾನ ನೀಲ ಈ ಬನದ ನವಿಲ
ಚಿತ್ತಾರಗಳನು ತಂದು
ಸುರಿಯುತಿಹ ಮಳೆಯ ಹರಿಯುತಿಹ ಹೊನಲ
ಒಲವಿನೊಳು ಮುಳುಗಿ ಬಂದು

ಭಾವದೊಳ ಬಣ್ಣ ಒಳಗಣ್ಣ ತುಂಬಿ
ಶಿವಬಿಂಬವಾಗಿ ನಿಲಲಿ
ಸಾವಿಲ್ಲದಂಥ ಪದವಾಗಿ ನಿಂತು
ಸಮರಸವ ಸುರಿಸುತಿರಲಿ

**15/12/2014**

## 59. ಬೆರಗು

ಮನ ಕುಣಿವುದು ಮುಂಜಾನೆಯ ಮುಸುಗಿಗೆ
ಕಣ್ ತಣಿವುದು ಪ್ರತಿ ಸಂಜೆಯ ಕೆಂಪಿಗೆ
ಬೆರಗಾಗುವುದೀ ಸೃಷ್ಟಿಯ ಬೆಡಗಿಗೆ
ಛಂದಃಪ್ರಾಸವಿರಡಿಗಡಿಗೆ

ಸುಳಿದಾಡುವ ತಂಗಾಳಿಯ ಸ್ಪರ್ಶಕೆ
ಹರಿಯುವ ಹೊನಲಿನ ಬೆಳ್ನೊರೆ ನಗುವಿಗೆ
ಗುಡುಗಿಗೆ ಸಿಡಿಲಿಗೆ ಕಡಲಿನ ಮೊರೆತಕೆ
ವನಖಗಜಲಚರ ನಿಃಸ್ವನಕೆ

ಕುಸುಮಿತ ತರುಗಳ ಬಹುಫಲಭಾರಕೆ
ಗಿರಿಕಟಿಯಟವಿಯ ಮೈಕೈಮಾಟಕೆ
ಸರಸರ ಚಿಮ್ಮುವ ಚಿಗುರಗಳೋಟಕೆ
ಚಂದನಚರ್ಚಿತ ಘಮಘಮಕೆ

ಅನ್ನವ ಬೆಳೆಯುವ ಬುವಿ ತಾಯ್ತನಕೆ
ಚಿನ್ನವ ನೀಡುವ ಗಣಿನಿಸ್ವಾರ್ಥಕೆ
ಕಾಣದ ಕೈಗಳ ಬಳೆಗಳ ನಾದಕೆ
ಶ್ರುತಿಲಯವಿರೆ ಪ್ರತಿಕಣಕಣಕೆ

**27/12/2014**

## 60. ಉಪ್ಪಿಟ್ಟಿನ ಸ್ವಗತ

ಇಡ್ಲಿಗಾದರೆ ಚಟ್ನಿ, ಸಾಂಬಾರು, ಸಾಗುಗಳು,
ಬಗೆಬಗೆಯ ಪಲ್ಯಗಳ ರುಚಿರುಚಿಯು ಏಕೆ?
'ಉಪ್ಪಿಟ್ಟು' ನಾನಾಗಿ ಬಹು ಉದರ ಸೇರಿದರೂ
ಒಂದಿನಿತು ಗೌರವವೂ ನನಗಿಲ್ಲವೇಕೆ?

"ಉಪ್ಪಿಟ್ಟು! ಥೂ!" ಎಂದು ಹೀಗಳೆಯುವವರೆಲ್ಲ
ಮರೆತಿಹರು 'ಮಾನ'ವನು ಉಳಿಸಿದಾ ದಿನವ
ಎಂಟು ಜನ ದಂಡಾಗಿ ಬಂದಾಗ ಮಾಡುವರೆ
ಅವರ ನೆಚ್ಚಿನ ಇಡ್ಲಿ ಮತ್ತು ವ್ಯಂಜನವ?

ಬಡವಬಲ್ಲಿದರೆಂಬ ಭೇದವಿಹುದೇ ನನಗೆ
ಖಾಲಿಯಾಗದು ಎಂದೂ ರವೆಯ ಹಳೆಡಬ್ಬ
ಹೊತ್ತುಗೊತ್ತಿಲ್ಲದಾ ಹತ್ತು ನೆಂಟರು ಬಂದು
ತಿಂದುಂಡು ತೇಗುತಿರೆ ಅಂದೆನಗೆ ಹಬ್ಬ

ಮದುವೆಯಾಗದ ಮಂದಿ ನೆಚ್ಚಿಹರು ನನ್ನನ್ನೆ
ತಿಳಿದುಕೋ ಮಾನವನೆ! ಉಪ್ಪಿಟ್ಟ ಮಹಿಮೆ
ಹೆಂಡತಿಯು ತವರಿನಲಿ ತಳವೂರಿ ನಿಂತಿರಲು
ಕಾಪಿಟ್ಟೆನಲ್ಲವೇ ಗಂಡನಾ ತಾಳ್ಮೆ !?

**11/01/2015**

## 61. ಸಂಭ್ರಮಿಸು

ಬಿತ್ತರದ ಆಗಸದಿ ಕತ್ತಲೆಯ ತಾ ಕಳೆದು
ಬತ್ತದುತ್ಸಾಹದಲಿ ಸಂಚರಿಸಿ ರವಿಯು
ನಿತ್ಯ ಋತುಪರ್ವಗಳ ಉಲ್ಲಾಸರಸವಿರಿಸೆ
ಉತ್ತರಕೆ ಪದವಿರಿಸಿ ಹಾಡಿದನು ಕವಿಯು

ಎಳ್ಳು ಬೆಲ್ಲವ ತಿಂದು ಒಳ್ಳೆಯಾ ಮಾತಾಡು
ಬಲ್ಲವರ ಸೂಳ್ನುಡಿಗಳನು ಸಂಕಲಿಸು
ಹಲ್ಲುಗಳ ನಡುವಿರಿಸಿ ಕಬ್ಬ ಮೆಲ್ಲುತ ಸಾಗು
ಗೆಲ್ಲುಗಳ ಸಂಕ್ರಮಿಸಿ ಸಂಭ್ರಮಿಸಿ ಸುಖಿಸು

ಅಣುವಣುವು ಕ್ಷಣವೆಣಿಪ ತಾಳಕ್ಕೆ ಝಣಝಣಿಸೆ
ಮನಕೆ ಸಂತಸವೀವ ಭಾವವನು ಹರಿಸು
ಮೌನಘನಚೇತನದ ಕಣದಿ ನುಡಿಗಳನೊಕ್ಕಿ
ಅನವರತ ಕುಣಿಕುಣಿದು ಸುಗ್ಗಿಯಾಚರಿಸು

**15/01/2015**

## 62. ಕುಂತೀಪ್ರಲಾಪ

ಕಂದನಂದವು ಮೊಗದ ಚೆಂದವು
ತಂದೆಯಂತಿದೆ ಎಂದರೆ?
ಒಂದು ದಿನದಲಿ ಹೇಗೆ ಬಂದನು
ಎಂದರಾಗದೆ ತೊಂದರೆ?

ಹೂವನಿಡದೇ ಫಲವ ಬಿಡುವುದೆ?
ಯಾವ ಬಳ್ಳಿಯದೆಂದರೆ?
ಭಾವವಿರದೇ ಕವಿತೆಯಿರುವುದೆ?
ಯಾವುದೀ ಬಗೆಯೆಂದರೆ?

ಏನ ಮಾಡಲಿ ಎತ್ತ ಪೋಗಲಿ
ಕಾಣದಾಗಿದೆ ಕಂದನೆ
ಕ್ಷಣದಿ ವರವನು ಒರೆಗೆ ಹಚ್ಚಲು
ಮಾನವನ್ನೇ ತೆತ್ತೆನೆ?

ನನ್ನ ತಾಯ್ತನಕೇಕೆ ನಿಂದೆಯು
ಇನನ ಹೆತ್ತವರಾರದು?
ಮೌನದುದರದಿ ಮಾತು ಮೊಳೆಯದೇ?
ತಾನದಮ್ಮನದಾರದು?

ಹರಿಯ ಚರಣದ ಸತತಧಾರೆಯೆ
ಹರನ ಜಟೆಯೊಳ ಬಂಧಿಯೆ!
ಹರಿಯಬಿಡುವೆನು ನಿನ್ನ ಹರಿವಲಿ
ಹರಸಲಾರೆಯ ಗಂಗೆಯೆ!

**ಕರುಳ ಕುಡಿಯನು ಮಡಿಲಿಗಿಡುವೆನು**
**ಪೊರೆಯಲಾರೆಯ ಪಾಪವ?**
**ಕರ್ಮಭಾರವ ಮೇಲೆ ತೇಲಿಸಿ**
**ತಣಿಸಲಾರೆಯ ತಾಪವ?**

**25/01/2015**

## 63. ಧ್ವನಿ

ಯಾವುದೋ ಕಲ್ಪನೆಗೆ ಕವಿಮನವು ಸಂಚಲಿಸಿ
ಉಲ್ಲಾಸಭಾವದಲಿ ಉಯ್ಯಾಲೆಯಾಡಿ
ವ್ಯೋಮಾದಿ ಮಧ್ಯಾಂತ್ಯರಾಹಿತ್ಯ ಪರಿಪೂರ್ಣ–
ಪದಬಂಧಸಾಹಿತ್ಯದಾನಂದವೂಡಿ

ಅದ್ವೈತ ವಾಗರ್ಥಬೀಜಗಳನುಪಚರಿಸಿ
ಚಿತ್ತಭೂಮಿಯನಗೆದು ಅಲ್ಲಲ್ಲಿ ಬಿತ್ತಿ
ಸತ್ಸಂಗ ಸಾವಯವ ಸಾರಗಳನೈತಂದು
ನೇತ್ರಾದಿ ಕರಣಗಳ ಸೊಲ್ಲುಗಳನೊತ್ತಿ

ಅಸ್ತಿ ನಾಸ್ತಿಗಳೆಂಬ ಕಳೆಗಳೆಲ್ಲವ ಕಿತ್ತು
ಸದಸದ್ವಿವೇಕವಿಜ್ಞಾನತಂತ್ರದಲಿ
ಆಂತರ್ಯದಾಕಾಶವಿಸ್ತಾರಚೈತನ್ಯ–
ಕಣಸ್ಪರ್ಶದಾ ಝಣದ ಕುಣಿದಾಟದಲ್ಲಿ

ಕಾಮನಾ ಬಿಲ್ಲಂತೆ ವರ್ಣವೆಲ್ಲವು ಬಾಗಿ
ಸೃಷ್ಟಿಸೌಂದರ್ಯಕ್ಕೆ ತಾಗಿ ಧ್ವನಿಯಾಗಿ
ರವಿಯ ಸಾರಥಿಯಾಗಿ ಅರುಣ ತಾ ಬರುವಾಗ
ಬಾನಾಡಿಗಳ ಕೊರಳ ಸ್ವರಮೇಳವಾಗಿ
ತಾನನವೆ ತಾನಾಗಿ ಬಂತು ಹಾಡಾಗಿ

**27/01/2015**

## 64. ಸೃಷ್ಟಿ–ಸ್ಥಿತಿ–ಲಯ

ಉಚ್ಛ್ವಾಸವೇ ಸೃಷ್ಟಿ ನಿಃಶ್ವಾಸವೇ ನಾಶ
ಸ್ಥಿತಿಯುಸಿರ ಕುಂಭಕದ ಮಧುರ ಕ್ಷಣವು
ಆ ಕ್ಷಣದ ಕಲ್ಪನೆಗೆ ಭಾವಬಿಂಬವು ಫಲಿಸಿ
ಹೃದಯಮಧ್ಯದಿ ನೆಲೆಸೆ ಅದು ವಿಷ್ಣುವು

ಒಳಸೆಳೆದ ಉಸಿರಿನಾ ಶಕ್ತಿಯಿಂದಲಿ ಚಿಮ್ಮಿ
ಹೊಮ್ಮಿದಾ ಕಲ್ಪನೆಯು ಬ್ರಹ್ಮಲೀಲೆ
ಹೊರನೂಕಿದುಸಿರಿನಲಿ ವಿಷಯಗಳು ಮರೆಯಾಗೆ
ಅದು ನಮ್ಮ ಪರಶಿವನ ಲಯದ ಲೀಲೆ

ಉಚ್ಛ್ವಾಸಸಂಕಲ್ಪಸೃಷ್ಟಿಯದು ಒಳ ಬಂದು
ಕುಂಭಕದಿ ತಾ ನಿಂತು ಚಿತ್ರವಾಗಿ
ಭಾವಾಂತ್ಯವರ್ಣವದು ತಾ ವಿಸ್ತಾರವಾಗೆ
ಜಗದಗಲ ಶೋಭಿಪುದು ವಿಷ್ಣುವಾಗಿ

**05/03/2015**

## 65. ರಾಮ

'ಮರ ಮರ' ಎಂದರೆ ಸರಸರ ಬರುವನು
ವರವೀಯುತಲಾ ಶ್ರೀರಾಮ
ಮರದೊಳಗಿನ ಮಂದಾಗ್ನಿಯ ತೆರದಲಿ
ಅರಿವೊಳಗಿಹನಾ ರಘುರಾಮ

ಹರಿವ ಹೊನಲುಗಳ ಬೆಳ್ನೊರೆ ನಗುವಲಿ
ಇರವನು ತೋರುವನರೆ ಚಣದಿ
ಮೆರೆವನು ಮೌನದ ತಳದುದ್ದಗಲದಿ
ಸರಯೂ ನೀರಂತವಸರದಿ

ಬೀಸುವ ಗಾಳಿಯೊಳೀಸುತ ಬರುವನು
ಉಸಿರೊಳು ಧುಮುಕುತಲೇಳುವನು
ಹಸಿರಲೆ ಕುಡಿಗಳಿಗೀಯುತ ಹೊಸತನು
ನಸುನಗುತಲಿ ಕುಣಿದಾಡುವನು

ಹೊಲದೊಳಗಿಹನಾ ಹಾಲ್ದೆನೆಕಾಳೊಳು
ನೆಲದೊಳಗಾ ಜಲರೂಪದೊಳು
ಒಲವಿನಲುಸಿರಿದ ಒಂದಕ್ಷರವನು
ಹಲವಾಗಿಸುವಾ ಮಂತ್ರದೊಳು

ಹಕ್ಕಿಗಳುಲಿಗಳ ಬಾನಲಿ ಹರಹುತ
ಒಕ್ಕುವನಾ ಹರಿ ಪ್ರಣವವನು
ಅಕ್ಕರದುದರಕೆ ಅರ್ಥವ ತೂರಿ
ಹೊಕ್ಕೆದೆಯೊಳು ತಾ ಮೊಳಗುವನು

**29/03/2015**

## 66. ನಿವೇದನೆ

ಓಡಬೇಡವೆಲೆ ಕಾಲ! ಮನವು ಓಡುವ ಹಾಗೆ
ಎಡಬಿಡದೆ ನನ್ನೊಡನೆ ಮೆಲ್ಲನಾಡುತಿರು
ಸಡಗರದಿ ನಾನಿರಲು ನೀ ಮುಂದೆ ಹೋಗದಿರು
ಕಾಡುವಾ ಬೇಸರಕೆ ವೇಗಗುಂದದಿರು

ಕಷ್ಟವದು ಬಂದಾಗ ಮನವ ಮುಂದೆಳೆದು ನೀ–
ನಿಷ್ಟವಿರೆ ಹಿಂದೆಳೆದು ಸಮತುಲನಗೊಳಿಸು
ಸೃಷ್ಟಿತಾಳಕೆ ನಲಿವ ವಿಶ್ವದೃಷ್ಟಿಯ ಹಾಗೆ
ವ್ಯಷ್ಟಿರೂಪದೊಳೆನ್ನ ಸಂತುಷ್ಟಿಗೊಳಿಸು

ಹೂವರಳಿ ಕಾಯಾಗಿ ಪಕ್ವವಾಗುವ ಹಾಗೆ
ಜೀವನದ ಅನುಭವವು ತಾ ಮಾಗುತಿರಲಿ
ಭವಕರ್ಮಕೃತಫಲವು ತೊಟ್ಟು ಕಳಚುತಲುದುರಿ
ಶಿವಧ್ಯಾನದಾನಂದಮೌನವೊಂದಿರಲಿ

**30/03/2015**

## 67. ತರುದೇವತೆ

ಬೇಸಿಗೆಯ ಬೆಂಗಾಡ ಬೇಗೆಯಲಿ ಬಸವಳಿಯೆ
ನೆರಳನೀಯುತ ಬಯಲ ಒಂಟಿ ಮರವು;
ತರಗೆಲೆಯ ತಳಹಾಸ ತಂಪಿತ್ತು ಹರಸುತಿರ–
ಲೆನಗೇಕೆ ಬೇಕು ಮತ್ತೊಂದು ವರವು

ಆ ಮರದ ಹಸಿರೆಲ್ಲ ನನ್ನುಸಿರ ಜಸವಾಗಿ
ಕಣಕಣದಿ ಹೊಸ ಹುರುಪಿನರಳ ಕುಣಿಸಿ
ಉಲ್ಲಾಸದಾ ಮಂದಹಾಸವನು ತಂದಿರಿಸಿ
ಎದೆಯಗಲ ನುಡಿಯಿಂಪ ಕಂಪ ಸೂಸಿ

ಬಿಸಿಲ ಬೆಂಕಿಯ ಹೊತ್ತು ತಂಪೀವ ತರುದೇವಿ–
ಯವತರಿಸಿ ಆನಂದಸುಧೆಯ ತರಲು
ಅದಕಿಂತ ಬೇರಾವ ದೇವತೆಯ ನಾ ಕಾಣೆ
ಮನವ ಹೂವಂತೆ ಸತತವಡಿಗಿರಿಸಲು

**04/04/2015**

## 68. ಕೊಳ್ಳುಬಾಕ

ಕೊಂಡವಸ್ತುಗಳೆಲ್ಲ ಸ್ಥಳಪೂರ್ತಿಯಾಕ್ರಮಿಸಿ
ನಿಲ್ಲಲೂ ನೆಲೆಯಿಲ್ಲ ಮನೆಗಳೊಳಗೆ
ಆದರೂ ನಿಲ್ಲದದು ಕೊಳ್ಳುವಿಕೆಯಾರ್ಭಟವು
ತೃಪ್ತಿಯೊಂದಿನಿತಿಲ್ಲ ಮನಗಳೊಳಗೆ

ಬಂದಿಹುದು ಇಂದಲ್ಲಿ ವಿಧವಿಧದ ವಸ್ತುಗಳು
ಮನದಣಿಯೆ ನೋಡೋಣ ಎಂದುಕೊಂಡು
ಅಂಗಡಿಗೆ ಹೋದೊಡನೆ ದೋಚಿದಂತೆಯೆ ಬಾಚಿ
ಮನೆಗೆ ತಂದಿಹ ನೋಡಿ ಕೊಂಡುಕೊಂಡು

ಕೊಳ್ಳುವಾಸೆಯು ನುಸುಳಿ ಮನದಗಲ ಕುಣಿದಾಡೆ
ಕೊಂಡು ತರುತಿಹ ದಿನವೂ ಒಂದೊಂದು ಸರಕ
ಒಂದರಾ ಮೇಲೊಂದು ಇಟ್ಟರೂ, ಸಾಲದಿಹ
ಸರಕುಗಳೆ ತುಂಬಿರುವ ಮನೆಯೊಂದು ನರಕ

**18/06/2015**

## 69. ಹಲಸಿನ ಸಂತೆ

ಯೋಗದ ಕಠಿಣತೆಯೊಗ್ಗದು ಮನಸಿಗೆ
ಬಗ್ಗದು, ಬಳುಕದು ಕೈಕಾಲು
ಹೋಗುವ ಬನ್ನಿರಿ ಹಲಸಿನ ಸಂತೆಗೆ
ಭೋಗದ ಅರಮನೆಗಡಿಯಿಡಲು

ಬಿಸಿಬಿಸಿ ಹಲಸಿನ ದೋಸೆಗಳು
ಹಿಸಿದಿಹ ಬಿಡಿಬಿಡಿ ಹಣ್ಣುಗಳು
ಎಳೆಯರ ಗಮನವ ಕೂಡಲೆ ಸೆಳೆಯುವ
ಎಳೆದೊಳೆಗಳ ಮಂಚೂರಿಗಳು

ಕುದಿಯುವ ಎಣ್ಣೆಯ ಆಳಕೆ ಇಳಿದು
ಬಾಣಲೆಯುದ್ದಗಲಕೆ ಹರಿದು
ತೇಲಾಡುತಲಿವೆ ರುಚಿ ಮೂಳಕಗಳು
ಸುಂದರ ಸಂಜೆಯ ಕೆಂದೆಳೆದು

ಮೆಲ್ಲಿರಿ ಹಲಸಿನ ಹಣ್ಣಿನ ಬಗೆಗಳ
ರುಚಿಕರ ಹಪ್ಪಳ ಚಿಪ್ಸುಗಳ
ಮರೆಯಿರಿ ಮೈಕೈ ನೋವುಗಳ
ಸವಿಯುತ ಬಿಸಿಬಿಸಿ ಖೀರುಗಳ

ಕೊಬ್ಬಿದ ದೇಹವನುಬ್ಬಿಸಿ ನಡೆಯಿರಿ
ಹಲಸಿನ ಹಬ್ಬದ ಉತ್ಸವಕೆ
ರುಚಿಗಳನೆಲ್ಲಾ ದಬ್ಬಲು ಉದರಕೆ
ನುಗ್ಗಿರಿ ಒಮ್ಮೆಲೆ ಪ್ರಾಂಗಣಕೆ

**29/06/2015**

## 70.ಮಾತು

ಅಂತರಂಗದ ಮೌನ ತಾನೆದ್ದು ಕುಣಿಯುವುದು
ಅಖಿಲಚೇತನದೊಲವು ಅಂಕುರಿಸಿದಾಗ
ಜಿಹ್ವೆಯೊಳಗಾಡುತಿಹ ನುಡಿಸಿರಿಯು ನಮದಲ್ಲ
ಪದಗಿರಿಜೆಯನು ಅರ್ಥಶಿವನಪ್ಪಿದಾಗ

ಮಾತುಗಳು ಮುಗಿದರೂ ಮುಗಿಯದದರರ್ಥಗಳು
ವಿಶ್ವಮೌನದ ಜಲಧಿಯಲೆಯಾಗಿ ಕುಣಿದು
ಕಡಲ ಸೇರಿದ ಹೊನಲು ಆಗಸಕೆ ತಾನೇರಿ
ಮಳೆಯಾಗಿ ಸುರಿವಂತೆ ಮನದಾಳಕಿಳಿದು

ಮತ್ತೊಂದು ನುಡಿಯರಸಿ ಮತ್ತದನು ವರಿಸಿ
ಸೃಷ್ಟಿತಾಳದ ಗತಿಗೆ ಚಿತ್ತದೊಳು ಚಲಿಸಿ
ಭಾವವರ್ಣದಿ ಮಿಂದ ಜೀವದೊಳಗೊಂದಾಗಿ
ಅವತಾರವೆತ್ತುವುದು ಮಾತಿನೊಳು ಜನಿಸಿ

**16/07/2015**

## 71. ಮಳೆನಾಡು

ಗಿರಿವನಗಳಿಗಪ್ಪಳಿಸಿಹ ಕಾರ್ಮೋಡದ ಬಿರುಹೊಡೆತಕೆ
ನಡುಹಗಲಲಿ ಧರೆಗಿಳಿದಿಹ ನಟ್ಟಿರುಳಿನ ಕಾಲ್ತುಳಿತಕೆ
ಕಾಣುವುದೆಲ್ಲವೂ ಕಾರ್ನಾಡು;
ಎಲ್ಲಿದೆ ನಮ್ಮಯ ಮಲೆನಾಡು

ಆಷಾಡದ ಜಿಹ್ವೆಯ ಮೇಲುದ್ಘೋಷಿತ ಶತರುದ್ರಕೆ
ಗೋರ್ಕಲ್ಲಲಿ ಮೈನೆರೆದಿಹ ಸುರಗಂಗೆಯ ಸಂಚಲನಕೆ
ಕೆನ್ನೀರೊಡೆದಿದೆ ಮಣ್ಣೊಲವು
ಉಬ್ಬಿವೆ ಎಲ್ಲಾ ಹೊಳೆ ಹರಿವು

ಕಾಲುವೆಗಳ ಕಾಲೊಡಿದಿವೆ
ಅಣೆಕಟ್ಟಿನ ಹಣೆಯೊಡೆದಿದೆ
ನಡು ರಸ್ತೆಯು ತುಸು ಹೆದರಿದೆ;
ನೀರಾಳದಿ ತಾನಡಗಿದೆ
ಕೆರೆಕಟ್ಟೆಯು ಬಿರುಬಿಟ್ಟಿರೆ ಇಲ್ಲಿ?
ಒಗ್ಗೂಡುತಿರೆಲ್ಲಾ ಜಲವಿಲ್ಲಿ

ಎಲ್ಲಿದೆ ನಮ್ಮಯ ಮಲೆನಾಡು
ನಮ್ಮೆದುರಿರುವುದು ಮಳೆನಾಡು

**19/07/2015**

## 72. ಕಾಲ

ನಾಳೆಯನಿಂದೇ ನೋಡುವ ಆಸೆಯು
ಈಡೇರುವುದೇ ಇಲ್ಲ
ನಿನ್ನೆಯ ನೋಡಲು ಹಪಹಪಿಸಿದರೂ
ಕಾಣಲು ಆಗುವುದಿಲ್ಲ

ಕಾಲವು ಚಲಿಸುವ ಗತಿಯನು ಮೀರಿ
ದೇಹವು ಚಲಿಸುವುದಿಲ್ಲ
ಮನಸಿನ ಆತುರ–ಕಾತುರಕೆಲ್ಲ
ಕಾಲದ ಸ್ಪಂದನೆಯಿಲ್ಲ

ಕಾಲದ ಪಕ್ವವನರಿಯುತ ಬೇಯಿಸೆ
ಪಾಕವು ರುಚಿಕಟ್ಟಾಗುವುದು
ಯಂತ್ರದ ಬಲದೊಳಗನ್ನವ ಬೇಯಿಸೆ
ಅಂತಃಶಕ್ತಿಯು ಕುಂದುವುದು

ನಾಳೆಯ ಅನ್ನವನಿಂದೇ ಬೇಯಿಸೆ
ತಿನ್ನುವ ಸಮಯಕೆ ಹಳಸುವುದು
ನಿನ್ನೆಯ ಹಳಸಲ ವಾಸನೆಯಂತೆ
ಕಳೆದಿಹ ಕಾಲವು ಕಾಡುವುದು

ಕಾಲದ ತಾಳಕೆ ಹೆಜ್ಜೆಯನಿಕ್ಕುತ
ಬಾಳೊಳು ನಾಟ್ಯವನಾಡುತಿರೆ
ಕಾಲದ ಅನುಭವಸಾಗರದಲೆಯೊಳು
ಚಲಿಸುವ ಮನ ತಾ ನಿಲ್ಲುತಿರೆ

**ನಾಟ್ಯವ ನೋಡುವ ನೋಡುಗನೇ**
**ನಾಟ್ಯವನಾಡುವನಾಗುವನು**
**ನೋಡುಗನವನೇ ಆಡುಗನಾಗಿ**
**ನೋಡುವ ನೋಟವೆ ಆಗುವನು**

**22/07/2015**

## 73. ಸದಾಶಯ

ಮಳೆ ಸುರಿಯಲಿ ಹೊಳೆ ಹರಿಯಲಿ
ಜಲದೊರತೆಗಳೊಡೆಯಲಿ
ತಳ ತಂಪಿನ ನೆಲಗಂಪಲಿ
ಬೆಳೆಗಳು ಬಸಿರೊಡೆಯಲಿ

ಮರಮರಗಳು ನಲಿಯುತಿರಲಿ
ಸ್ವರಸಂಪದದಿಂಪಲಿ
ಥರ ಥರ ಖಗಚರಗಳೆಲ್ಲ
ಗರಿಗೆದರಲಿ ಗುಂಪಲಿ

ಉಸಿರುಸಿರಿಗೆ ಹೊಸ ಹುರುಪಿನ
ಸಸಿಗಳ ಕಸಿಗಟ್ಟಲಿ
ತುಸು ನಾಚಿದ ನಸು ನಗೆಗಳ–
ನೆಸೆಯುತ ತುಟಿ ತಟ್ಟಲಿ

ಸೃಷ್ಟಿಯೊಲವು ದೃಷ್ಟಿಗಿಳಿದು
ಕಷ್ಟವೆಲ್ಲವಳಿಯಲಿ
ಅಷ್ಟದಳದಲಿಷ್ಟದೇವ–
ನಷ್ಟರೂಪವುಳಿಯಲಿ

**25/07/2015**

## 74. ಮಾತೊಂದ ಕೇಳು ಮನವೆ!

ಕಾರಣವು ಇಲ್ಲದೆಯೆ ಓಡದಿರು ಎಲೆ ಮನವೆ!
ಕುಟ್ಟಿ ಕುಂದಾಪುರಕೆ ಹೋದ ಹಾಗೆ
ಅಜ್ಜಿಯಾ ಮನೆ ಮುಟ್ಟಿ ಹಿಂದಿರುಗಿ ನೀ ಬರಲು
ಅಷ್ಟು ವೇಗದ ಓಟವೇತಕ್ಕೆ ನಿನಗೆ?

ನೀನು ಬಯಸಿದ ವಸ್ತುವಿಷಯಗಳು ನೂರಾರು
ಎಲ್ಲವೂ ನಿನಗೆಲ್ಲಿ ದಕ್ಕುವುದು ಹೇಳು?
ರಸ್ತೆಗಳ ಉಬ್ಬುಗಳು ಅವಸರವ ತಡೆವಂತೆ
ನನ್ನ ಮಾತಿದು ನಿನಗೆ ತಡೆಯಂತೆ– ಕೇಳು

ನಿನ್ನೆಲ್ಲ ಮುಖಗಳನು ನನಗೆ ಕಾಣುವ ಹಾಗೆ
ಮುಖವಾಡಗಳನೆಲ್ಲ ಎಸೆದುಬಿಡು ಮನವೆ!
ನೀನಿಡುವ ಹೆಜ್ಜೆಗಳ ಎಣಿಕೆಗಳು ಸಿಗುವಂತೆ
ಅಂಬೆಗಾಲಲಿ ಇತ್ತ ಬಾರೆನ್ನ ಮಗುವೆ!

**12/08/2015**

## 75. ನಲ್ಲೆ

ನಲ್ಲೆಯು ತವರಿಗೆ ತೆರಳಿದಳೆಂದರೆ
ಮೊಲ್ಲೆಯ ಬಳ್ಳಿಯು ಬಾಡುವುದು
ಚೆಲ್ಲುವ ಪರಿಮಳಕೆಲ್ಲಿದೆ ಮುಕುತಿಯು?
ಸೊಲ್ಲಿನ ಶಕುತಿಯೂ ಕುಂದುವುದು

ಅಡಿಗೆಯ ಗಡಿಗೆಗಳಡಿಮೇಲಾಗಿ
ಗಡಿಬಿಡಿಗೆಲಸದಲೊಡೆಯುವುವು
ಬಡಿಸುವ ಕೈಬಳೆ ಮಿಡಿತವ ಕೇಳದೆ
ನುಡಿನಡೆಬೆಡಗುಗಳಡಗುವುವು

ಮಂಗಳ ರಂಗುಗಳಿಲ್ಲದ ಆ ಮನೆ–
ಯಂಗಳ ಬಣಬಣಗುಟ್ಟುವುದು
ನುಂಗಲು ತಟ್ಟೆಯೊಳಿಟ್ಟಿಹ ಗಂಜಿಯು
ಚಂಗನೆ ತಿಪ್ಪೆಗೆ ಜಿಗಿಯುವುದು

ನಲ್ಲೆಯು ಮೆಲ್ಲನೆ ಮನೆಯೊಳಗಡಿಯಿಡೆ
ಗಲ್ಲದ ಹೂವಲ್ಲಾಡುವುದು
ಬೆಲ್ಲದ ಸವಿಯೋಡೋಡುತ ಬರುವುದು
ನಲ್ಲನ ಕೆನ್ನೆಯ ಸವರುವುದು

**16/08/2015**

## 76. ಬೇಲಿಯೇ! ಮಾತಾಡು

ಹಿತ್ತಲಲಿ ಹಿಗ್ಗುತಿಹ ಹೂವು ಹೂವಿನ ಕಂಪು
ಹೊರ ಹಾರುತಿಹುದೇಕೆ ಎಲೆ ಬೇಲಿಯೆ!
ಹಾದಿಯಲಿ ಹೋಗುವವರೋರೆ ಕಂಗಳ ನೋಟ–
ಗಳನೇತಕೊಳಬಿಡುವೆ ಸೋಮಾರಿಯೆ!

ನನ್ನದೆಂಬುದನೆಲ್ಲವೊಳಗೊಳಗೆ ಬೆಳೆಸಿಟ್ಟು
ನಿನ್ನ ಕಾವಲಿಗಿರಿಸಿ ನಾ ಸುಮ್ಮನಿದ್ದೆ
ನೀನೆನ್ನ ನಂಬಿಕೆಯ ನುಚ್ಚು ನೂರಾಗಿಸಿದೆ
ನಿದ್ದೆಯಲಿ ನೀನೇಕೆ ಎಲ್ಲ ಮರೆತಿದ್ದೆ?

ಬಳ್ಳಿಗಳ ಬಳುಕಂದ ಮತ್ತದರ ಹೂ ಗಂಧ
ಮಕರಂದಗಳ ಒಡೆಯ ನಾನಲ್ಲವೆ?
ಬಣ್ಣ ಬಣ್ಣಗಳೆಲ್ಲ ನನ್ನದೆಂಬುದ ಮರೆತು
ಎಲ್ಲ ಹೊರಗೆಸೆದದ್ದು ತಪ್ಪಲ್ಲವೆ?

ನೀ ಕಾಯುತಿಹೆಯೆಂಬ ಹುಸಿನಂಬುಗೆಯ ಬಿಟ್ಟು
ನಿನ್ನನೀಗಲೆ ಕಿತ್ತು ಹೊರ ಹಾಕಲೇ?
ನನ್ನದೆಲ್ಲವನೆಸೆದು ಜಗದೆಲ್ಲೆಯನು ಹೊಸೆದು
ಹೂಗಂಪಿನೊಳು ತೂರಿ ಹಾರಾಡಲೇ?

**12/09/2015**

## 17. ಇಪ್ಪೆ ಮರ

ಬಾಲ್ಯದಲಿ ಎಷ್ಟು ಸಲ ನಿನ್ನೇರಿ ಆಡಿದರೂ
ಒಮ್ಮೆಯೂ ನೀ ಮುನಿಸ ತೋರಲಿಲ್ಲ
ಹೂವೊಲವ ಸಿಹಿಯುಣಿಸಿ ಮನ ತಣಿಸಿದಾ ಇಪ್ಪೆ
ಮರವೇ! ನೀ ಹೀಗೆ ಕೆಳ ಬಿದ್ದೆಯಲ್ಲ!

ನಿನ್ನೊಡಲ ಕುಡಿಯೇಕೆ ಚಿಗುರೊಡೆಯಲಿಲ್ಲ?
ಬೇರೆಲ್ಲ ನೆಲದಿಂದ ಬೇರಾಯಿತಲ್ಲ
ರಸ್ತೆಯಗಲಿಸಿ ನಿನ್ನ ನೆಲಕೆ ದೂಡುವ ಕ್ಷಣದಿ
ನೀನೇಕೆ ಚೀರಿ ಕೂಗಾಡಲಿಲ್ಲ?

ಬಿದ್ದರೂ ಕೆಳಗೆ ನೀನೊದ್ದಾಡುತಿಲ್ಲ
ಮೈತುಂಬ ಆ ಪಾಚಿ ಹಸಿರುಡಿಸಿತಲ್ಲ
ತಾಯಿಬೇರೊಣಗೊಣಗಿ ಮಣ್ಣಾಗುತಿದ್ದರೂ
ಗೋಳಿನಲಿ ಒಮ್ಮೆಯೂ ಗೊಣಗುತಿಲ್ಲ

ನೋವುಗಳನೆಂದೆಂದೂ ತೋಡಿಕೊಳಲಿಲ್ಲ
ತಾಳ್ಮೆಯಾ ಗುಟ್ಟೆನಗೆ ಹೇಳಲೇ ಇಲ್ಲ
ನಿನ್ನೆದುರು ನಾನಿಂದು ಬಂದು ನಿಂತಿಹ ಕ್ಷಣದಿ
ಭಾವಸುಮಗಳು ಹೀಗೆ ಚೆಲ್ಲಾಡಿತಲ್ಲ!

**21/09/2015**

## 78.ಮಲಗು

ಬಾಳಗಡಿಕಲ್ಲಿನಡಿ ಜಾಗವೆಷ್ಟಿದೆಯೋ?
ಆಸೆ ಕೋಟೆಯನಲ್ಲಿ ಕಟ್ಟುವಷ್ಟಿದೆಯೋ?
ಆ ಕಲ್ಲಿನಾ ಗಟ್ಟಿಯೊಡೆಯದಷ್ಟಿದೆಯೋ?
ಮೇಲೆನ್ನ ಹೆಸರೊಂದು ಕೆತ್ತುವಷ್ಟಿದೆಯೋ?

ಆಯಾಸ ಕಳೆವಷ್ಟು ಅಗಲವಾಗಿದೆಯೋ?
ಹಾರಿ ಕುಣಿಯುವ ಹಾಗೆ ಆಳವಾಗಿದೆಯೋ?
ಕ್ರೋಧಮೋಹಗಳೆಲ್ಲ ನೆಗೆಯುವಂತಿದೆಯೋ?
ಪಾಪಬಿಂಬವು ತುಂಬಿ ತುಳುಕುವಷ್ಟಿದೆಯೋ?

ಬೇಡವೆಲೆ ಚಪಲಮನ! ಮೇರೆಯೊಂದೇಕೆ?
ಕಣ್ಣು ಕಂಡಿಹ ಕಲ್ಲ ನಿಲುವೊಂದು ಸಾಕೆ?
ಸೃಷ್ಟಿಮೂಲದ ಚಿತ್ತಕಲ್ಪನೆಯ ಹರಹಿ
ತಾನಲ್ಲಿ ತಾನನವ ತಂತಾನೆ ಸಲಹಿ

ಜಗದಗಲ ತೂರಿ ಹೆಸರಕಂತೆಯನೆಲ್ಲ
ಬಯಲ ಬೆಳಕಲಿ ಸಾಗಿ ವರ್ಣದೊಳು ಬಾಗಿ
ವಿಸ್ತಾರಶೂನ್ಯದೊಳು ವಿಶ್ರಾಂತಿಯಾವರಿಸೆ
ಪ್ರಕೃತಿಗರ್ಭದಿ ಮಲಗು ಮಗುವಾಗಿ ಮಾಗಿ

**21/10/2015**

## 79. ಗಂಜಿ

ಎಲೆ! ಗಂಜಿಯನುಂಡವನೆ! ನಂಜುಂಡನೆ!
ಭಲೇ! ಗಂಜಿಯನುಂಡವನೇ!

ಬೆವರಿಳಿಸಿ ತಂದಂಥ ಕೆಂಪಕ್ಕಿ ಗಂಜಿ
ಭವತಾಪದುರಿಯಲ್ಲಿ ಬೆಂದಿರುವ ಗಂಜಿ
ಶವದೆಡೆಗೆ ಎಸೆದಿರುವ ನೆನೆಯಕ್ಕಿ ಗಂಜಿ
ಶಿವ! ನೀನು ಮೆಚ್ಚುವುದದಾವ ಗಂಜಿ?

ಉದರವೈರಾಗ್ಯದಲಿ ಬೇಯಿಸಿಹ ಗಂಜಿ
ಮದಮೋಹಕಾಮಗಳನದುಮಿಟ್ಟ ಗಂಜಿ
ಮುದವಿತ್ತು ತೊದಲುಲಿಯ ನುಡಿಸಿದಾ ಗಂಜಿ
ಹದವರಿತು ಬೇಯಿಸಿಹ ಬಾಳ ಗಂಜಿ

ಶಿವೆ ತಾನು ತವರಿನಲಿ ತಳವೂರಿ ಕುಳಿತಿರಲು
ಶಿವ! ನೀನು ಧ್ಯಾನದಲಿ ಬೇಯಿಸಿಹ ಗಂಜಿ
ಭವಭಾಗ್ಯದಕ್ಕಿಯದು ಬಡವರಕ್ಷತೆಯಾಗೆ
ಭವ! ನೀನು ಚಪ್ಪರಿಸಿ ಸವಿದಂಥ ಗಂಜಿ

**23/10/2015**

## 80. ದಿವ್ಯತೆ

ಜಗದ ಕತ್ತಲೆಯಳಿಪ ಕರಿಯುಂಡ ಕಾಗೆಗಳೆ!
ಹಗಲ ಹಗುರದಿ ಕರೆದು ಹೆಗಲಿಗೆಳೆದು
ಸಾಗಿ ಸಾಲಾಗಿ ಕಾ ಕಾಯೆಂಬ ಕಲಸಿರಿಯ
ಬಾಗಿ ಬಾನ್ದನಿಯಲೆಯಲೆಗೆ ಬೆಸೆದು

ರವಿಯು ಕಾಣದ ಜಗವ ಕವಿಯ ಕಾಣ್ಕೆಯೊಳಿರಿಸಿ
ಭವದ ಭಾರವನಿಳಿಪ ಭಾವವಿರಿಸಿ
ನವರಸಗಳಂಬರದಿ ಸವಿಗಡಲ ಹನಿಹನಿಯು
ರವಮೇಘವಾಗುವಂತರ್ಥವಿರಿಸಿ

ಸುರಿಸುರಿದು ಸಂತತವು ಕವಿಕಲ್ಪಧಾರೆಯನು
ಹರಿಸಿ ಹರುಷದ ಹೊನಲ ಮಡಿಲದುಂಬುವಿರಿ
ಪರಪುಟ್ಟದಂಡಗಳ ಕಾವ್ಕೊಡುತಲೊಡೆದೊಡೆದು
ವರಕವಿಯ ನುಡಿಗೂಡಿನೆಡೆಗೆ ನೂಕುವಿರಿ

ಎದೆಗೊದೆವ ಕೂಸು ತಾ ತಾಯ ಮೊಗದೊಳು ಹುದುಗಿ
ಮೊದಲ ಪದದಿಂದಲ್ಲಿ ಗೀಚುತಿಹುದು
ಮುದದಿ ಮೆಲ್ಲನೆ ಮತ್ತೆ ಗಲ್ಲದಿಂ ಮೇಲೆಳೆದ
ತೊದಲ ಉಲಿಗಳಲಾಡಿ ಕುಣಿಯುತಿಹುದು

ಮತ್ತಾವ ಪದ್ಯಗಳು ಬೇಕೆಮಗೆ ನಮಗಿಂದು
ಕತ್ತಲೆಯ ಕರಗಿಸುವ 'ಕಾ'ಗುಣಿತವಿರಲು
ಎತ್ತಲೋ ಮರೆಯಾದ ಹೊತ್ತನೆಳೆದೈತಂದು
ಸುತ್ತಲೂ ದಿವ್ಯತೆಯ ನೀವು ಬಿತ್ತಿರಲು

**23/01/2016**

## 81. ಚಾನ್ದನಿಯೆ ಬಾ

ಚಿತ್ತಭೂಮಿಯನುತ್ತು ವಾಗ್ಬೀಜವಂ ಬಿತ್ತಿ
ಬತ್ತದಾ ಬೆಳೆತೆಗೆವ ಚಾನ್ದನಿಯೆ ಬಾ
ಸುತ್ತಲೂ ನೀನೊತ್ತುವರಿದು ಹರಿದಾರರಲಿ
ಹತ್ತಾರು ತೆನೆಗಳಂ ಬಾಗಿಸುತ ಬಾ

ಇತ್ತ ಬಂದೆನ್ನೆತ್ತಿ ಹೊತ್ತೊಳಗೆ ಕೊಂಡೊಯ್ದು
ಎತ್ತರಕೆ ಹಾರಿಸುತಲೇರಿಸುತಲಾಡು
ನೆತ್ತಿಗೇರುತಲೆದ್ದು ಮತ್ತೇರಿ ಕುಣಿಯುತಿರೆ
ಬತ್ತದಾ ಸುಳಿಯೊಳಗೆ ಸಾವಿರದ ಹಾಡು

ಗೊತ್ತೆನೆಗೆ ನೀ ಬರುವೆ ಗೊತ್ತಿಲ್ಲದಂತೆನಗೆ
ಗೊತ್ತುಗಳನೆತ್ತೊಗೆದು ಗೊತ್ತೊಂದ ಬಗೆದು
'ಗೊತ್ತಿಲ್ಲ'ದಾ ಲೋಪಸಂಧಿಯೊಳ ಸ್ವರದಂತೆ
ಗೊತ್ತುಂಟು ಮಾಡು ನೀ ಸಂಧಿಗಳನೊಡೆದು

ಎತ್ತಲೋ ಮಾಯವಾದಾ ಮುತ್ತ ಮೂಗುತಿಯು
ಮತ್ತೆ ತಾನವತರಿಸಿ ಬಳಿಗೆ ಬಂದಂತೆ
ಕತ್ತಲೆಯ ಹೆಬ್ಬಸಿರ ಸೀಳೊಡೆದು ಹೊರಬಂದು
ಸುತ್ತಲೂ ಹೊಂಗಿರಣ ವಿಸ್ತರಿಸುವಂತೆ

ತುತ್ತೊಂದ ತಿನ್ನುತಿರೆ ನಾಲಗೆಯು ರುಚಿಯೊಡೆದು
ಮತ್ತೊಂದ ತಾನೆಣಿಸಿ ಜಿನುಗುತಿರುವಂತೆ
ಹೆತ್ತಮ್ಮ ಹಗುರಾಗಿ ಕಂದನನ್ನೆದೆಗವುಚಿ
ಮುತ್ತುಗಳ ಮಳೆಗರೆದು ಅಳುತಣಿಸುವಂತೆ

ಚೆತ್ತದೇಟಿನ ಬರೆಗೆ ಬರೆದ ಬರಹದ ಹಾಗೆ
ಸತ್ತರೂ ಸವೆಯದಾ ಸತ್ಯದಾ ಹಾಗೆ
ಬತ್ತನ್ನದೊಳ ಸತ್ತ್ವ ತಾನಲ್ಲಿಯೇ ಉಳಿವಂತೆ
ಚಿತ್ತೈಸಿ ನೀನೆನ್ನೊಳಗೊಳಗೆ ಸಾಗೆ

**14/02/2016**

## 82. ತೆಳ್ಳಗಾಗಲೆನ್ನ ಕವಿತೆ

ತೆಳ್ಳಗಾಗಲೆನ್ನ ಕವಿತೆ
ಬಳ್ಳಿಯಾಗಲಿ
ಬೆಳ್ಳಿ ಮೂಡುವಾಗ ಬಳುಕಿ
ಬೆಳ್ಳಗಾಗಲಿ

ಒಡವೆಗಳನು ಕಿತ್ತೊಗೆದು
ಬೆಡಗ ತೋರಲಿ
ನಡುವಿನಂದ ಸೆಳೆಯುವಂಥ
ಉಡುಗೆ ಧರಿಸಲಿ

ಮೆಲ್ಲ ಮೆಲ್ಲ ಪಲ್ಲವಿಸಲು
ಗೆಲ್ಲನೊಡೆಯಲಿ
ಕಲ್ಲ ಮೇಲೆ ಚರಣವಿರಿಪ
ಮೊಲ್ಲೆಯಾಗಲಿ

ಬರಿಗಾಲಿನ ಮೆದುನಡಿಗೆಯ
ಸರಳೆಯಾಗಲಿ
ಗಿರಿವನಗಳ ಸುತ್ತುವಂಥ
ತರಳೆಯಾಗಲಿ

ಚೆಲುವ ಚೆಲ್ಲಿ ನಾಚಿಕೆಯಲಿ
ನೆಲವ ಗೀರಲಿ
ತಳಿರುಗೆಂಪಿನಂತೆ ಕೆನ್ನೆ-
ಯೊಲವನೆರೆಯಲಿ

**17/02/2016**

## 83. ಕತ್ತಲೆ

ಉರಿಯುತ್ತಿಹ ಕೆಂಡದುಂಡೆ
ಕಡಲೊಳು ಮುಳುಗುತ್ತಿರೆ
ಕರಿಸೊಬಗಿನ ನಿಶೆಯಿದ್ದಲ
ಹುಡಿ ಬಾನಲಿ ಚೆಲ್ಲಿರೆ

ಆ ಕೆಂಡಕೆ ನೀರುತಾಕಿ–
ದರೆಚಣದಲಿ ಸಾಸಿರ
ಕಿಡಿಗಳು ಸಿಡಿಸಿಡಿದುಡುಗಣ
ವಾಗಿರೆ ಬಲು ಸುಂದರ

ಭೂನಾರಿಯು ಜರಿತಾರೆಯ
ನುಟ್ಟಂತಿಹ ನೋಟ
ನಡುಬಳ್ಳಿಯು ಬಿಡಿಹೂಗಳ
ಬಿಟ್ಟಿರೆ ಬಾನ್ದೋಟ

ಕಣ್ಣೋಟವು ತಾ ನಿಂತಿದೆ
ಕತ್ತಲೆಯೊಳಗವಿತಿದೆ
ಕಲೆಯ ಶಕ್ತಿ ನೆತ್ತಿಗೇರಿ
ಸವಿಜೇನ್ಮಳೆಗರೆದಿದೆ

**27/02/2016**

## 84. ಭಾವಧಾರೆ

ಸರ್ವಾರ್ಥ ಸಂಸಾರದಾಪಗದ ಹರಿವಿನಲಿ
ಸ್ವಾರ್ಥಗಳ ಕಳೆಗಳನು ದಡಕೆ ತಳ್ಳಿ
ಸಾಗರವ ಸೇರಿ ತಾ ಹೆಸರನಳಿಸುವ ಭರದಿ
ಭೋರ್ಗರೆಯಲೆದೆಮಣ್ಣ ಹರಡುವುದು ನಳ್ಳಿ

ಅಲ್ಲೊಮ್ಮೆ ಬಾಗುತಿರೆ ಮಳೆಬಿಲ್ಲ ಬಣ್ಣಗಳು
ಭಾವಗಳು ಬೆಡಗಿನಲಿ ಬಳುಕುವುದ ನೋಡಿ
ಸೃಷ್ಟಿಯೇ ತಾನೆದ್ದು ತಾನನದಿ ಮೇಳೈಸಿ
ತಾಳಗಳ ಹಾಕುವುದು ತಂತಾನೆ ಹಾಡಿ

ಅರ್ಥಗಳನರೆದಿಲ್ಲ ಸ್ವಾರ್ಥಗಳ ಬೆಸೆದಿಲ್ಲ
ಆದರೂ ಪದಗಳಲಿ ಎಂಥದೋ ಕುಣಿತ
ಮುಂಬೆಳಗ ಸಂಭ್ರಮದಿ ಹಕ್ಕಿಗಳು ಹಾಡುವೊಲು
ಎದಬಾನನಾವರಿಸೆ ಸರಿಗಮವು ಸತತ

ಭಾವಧಾರೆಯ ಹರಿವು ಸಾವುನೋವ್ಗಳ ಮೀರಿ
ಸಂತತವು ಹೆಸರಿರವ ಮರೆಯುತಿರಲಲ್ಲಿ
ಯಾವುದೋ ದಿವ್ಯತೆಯ ಸೌಂದರ್ಯವವತರಿಸಿ
ಜಗದಗಲ ನಿಂತಂತೆ ಅರಿವಾಳದಲ್ಲಿ

**08/04/2016**

## 85. ಬಾ ವರ್ಣ

ಬಾ ವರ್ಣ! ಪರಿಪೂರ್ಣಚಲಿತಶಕ್ತಿಯ ಚರಣ!
ಭವಕಿಳಿದ ಪರಶಿವನ ದೃಷ್ಟಿಕೋನ
ಭಾವಚೈತ್ರದ ಪರ್ವಭಾಷೆಯೊಳು ಚಿತ್ರೈಸಿ
ಜೀವಜಲದಂತೆನಗೆ ನೀಡು ಕರುಣ

ವರ್ಷಪೂರ್ಣತೆಗಿಂದು ಹರ್ಷಚೂರ್ಣಿಕೆಯಾಗಿ
ಕರ್ಷಿಸುತಲನುರಣಿಪ ಸೃಷ್ಟಿಯೆ ಬಾ
ಸ್ಪರ್ಶಸುಖಸಂತೃಪ್ತಪದದೊಳಗಿನರ್ಥದೊಲು
ಘರ್ಷಿಸುತಲಾನಂದವೃಷ್ಟಿಯೆ ಬಾ

ಸ್ವರಗಳಾ ಸ್ವಾತಂತ್ರ್ಯಸಂಭ್ರಮೋತ್ಸವದಲ್ಲಿ
ಭರದಿಂದ ಹಗುರಾಗೆ ಭಾರಮತಿಯು
ನೀರವದ ನೀರೊರತೆ ಹರಿವಿನಿರವಿನ ಕಲದಿ
ಬೆರತ ವನದೊಲು ಬರಲಿ ಭಾವಸುಧೆಯು

ಎಲ್ಲಿ ನೋಡಿದರಲ್ಲಿ ಮಾಧುರ್ಯದಕ್ಷರವು
ಗೆಲ್ಲುಗಳನೊಡೆದೊಡೆಯೆ ಕನ್ನಡದೊಲು
ಸೊಲ್ಲಡತಿಯಡಿಗಡಿಗೆ ಪಲ್ಲವಿಸಿ ಚರಣವಿಡೆ
ನಿಲ್ಲಲೇ ನಾನಲ್ಲಿ ಮುನ್ನಡೆಯಲು?

**09/04/2016**

## 86. ಆಶೆ

ಬಾಲ್ಯವು ಕಳೆಯಿತು ಯೌವನವಳಿಯಿತು
ಮುಪ್ಪಡರಿತು ಮೈಮನಗಳಿಗೆ
ಆಶಾಗೋಪುರದೆತ್ತರವಿನ್ನೂ
ಏರುತಲಿದೆ ಬಾನೆತ್ತರಕೆ.

ಹೆಣ್ಣು–ಹೊನ್ನುಗಳು ಸಾಕು ಸಾಕೆಂದು
ಕನಸಿನಲು ಹೇಳನೆಂದೂ
ಮಾತು ಮಾತಿಗೂ ಹೇಳುತಿಹ ಮಣ್ಣಿ–
ನೊಡೆತನವು ತನ್ನದೆಂದೂ

ಬಾಳಗಡಿ ಸನಿಹವಾದರೂ ಬೇಲಿ–
ಗಡಿಯನಡಿದೂರ ವಿಸ್ತರಿಸಿ
ಒಡೆಯ ತಾನೆಂದು ಸಾರಿ ಹೇಳುವನು
ಅಲ್ಲಲ್ಲಿ ಹೆಸರ ಕೆತ್ತಿರಿಸಿ

ಕಡೆಗಲ್ಲಿನಡಿಯ ಹುಡಿಯಾಗಿ ಹೋಗೆ
ತಾನೆಂಬುದದರ ಅಡಿಯಾಗೆ
ಒಡೆತನವ ನೆನೆದು ವಡೆಯ ಸವಿಯುವರು
ಎಲ್ಲವೂ ಕೊನೆಗೆ ಮರೆಯಾಗೆ

**17/05/2016**

## 87. ಒಲವ ಹರಿವು

ಚೆಲುವು ಎದೆಯೊಲವಾಗಿ ಸಂಚಲಿಸದಿಹುದೆ?
ಕಂಗಳಾರ್ಜಿತ ಪುಣ್ಯ ಫಲಿಸಿದಾಗ
ಜಡಿಮಳೆಯು ಇಳೆಗಿಳಿದು ಹೊಳೆಯು ಮೈನೆರೆದು
ಕೆಂಬಣ್ಣದುಡೆಯುಟ್ಟು ಬಳುಕುವಾಗ

ಕಾರ್ಗಲ್ಲ ಬಂಡೆಗಳ ಸುತ್ತ ಸುತ್ತುತಲೆದ್ದು
ಕೇಕೆ ಹಾಕುತಲಾಡಿ ನಲಿಯುವಾಗ
ನಗೆಯ ಹನಿಗಳನು ನೆಲಕಪ್ಪಳಿಸಿ ಕುಪ್ಪಳಿಸಿ
ಒನಪು ಒಯ್ಯಾರದಲಿ ಕುಣಿಯುವಾಗ

ದಟ್ಟ ಕಾನನದಲ್ಲಿ ಕಣ್ವ ಋಷಿ ಕಾಪಿಟ್ಟ
ಚೆಲ್ವಿಯಾ ಚಂಚಲದ ಕಣ್ಣಿನೊಳ ಹೊಳಪು
ತೇಲಿ ಜೋಗದ ಬೆಳಕ ಕುಡಿಯಾಗಿ ಹೊರಹೊಮ್ಮಿ
ರಾಜಂಗೆ ಬಂದಂತೆ ಉಂಗುರದ ನೆನಪು

ಬನದ ಶಂಕರಿಯೊಮ್ಮೆ ಸಂಚರಿಪ ಇಚ್ಛೆಯಲಿ
ಮಳೆಯ ಹನಿಗಳ ಪಿಡಿದು ಹೊಳೆಯ ಮೈಯಾಗೆ
ಹಸಿರುಕಾಯ್ಗಳ ಹೊಕ್ಕು ಹೊಸ ಕಾಯ ಪಡೆದಂತೆ
ದೇವಿ ಶಾಕಂಭರಿಯು ತರಕಾರಿಯಾಗೆ

ಮಳೆಯು ಬರಿ ಮಳೆಯಲ್ಲ ಹೊಳೆಯು ಬರಿ ಹೊಳೆಯಲ್ಲ
ಸೃಷ್ಟಿಯೊಲವಿನ ಹರಹು, ಚೆಲುವ ಹರಿವು
ಹರಹು ಬರಿ ಹರಹಲ್ಲ ಹರಿವು ಬರಿ ಹರಿವಲ್ಲ
ಜಗದರಿವನರಿಯಲಿಕೆ ಇರುವ ಸುಳಿವು

**22/05/2016**

## 88. ಹಸಿವಿಲ್ಲದಿರೆ..

ಹೊಟ್ಟೆ ಚುರುಗುಟ್ಟಿರಲು ಗೊಡ್ಡು ಸಾರೂ ಕೂಡ
ನಳಭೀಮಗೌರಿಯರ ರಸಪಾಕದಂತೆ
ಬಟ್ಟಲಿಗೆ ಬಡಿಸಿದುದ ಬಳಿದುಂಡು ತೇಗುತಲಿ
ಹೊಗಳುವನು ಹೆಂಡತಿಯ–ನೀನು ಅವರಂತೆ

ಸಿಕ್ಕಸಿಕ್ಕಿದುದೆಲ್ಲ ಆಗಾಗ ಮುಕ್ಕಿರಲು
ಹಸಿವಿರದೆ ಮೊಸರಿನಲೂ ಕಲ್ಲ ಹುಡುಕುವರು
ಮೂರು ಬೆರಳುಗಳಿಂದ ಅಗುಳುಗಳ ಹೆಕ್ಕುವರು
ಮೃಷ್ಟಾನ್ನಗಳ ಚೆಲ್ಲಿ ತಟ್ಟೆ ಕುಕ್ಕುವರು

ಬಡತನದ ಬೇಗೆಯಲಿ ಬೆವರಿಳಿಸಿ ದುಡಿವವರು
ಕಾಳುಕಾಳ್ಗಳಲಿ ಬರಹಗಳ ಕಾಣುವರು
ಸಿರಿತನದ ಉಬ್ಬರದಿ ಉಂಬಲಾಗದ ಮಂದಿ
ಬೇವಿನೆಸೆಳುಗಳಲ್ಲೂ ಹುಳವ ಹುಡುಕುವರು

**16/06/2016**

**89. ಗೊಂದಲ**

ಯಾವ ಸೀರೆಯನುಡಲಿ? ಯಾವ ರವಿಕೆಯ ತೊಡಲಿ?
ತೊಟ್ಟುಡುಗೆಯನೆ ಮತ್ತೆ ಹೇಗೆ ತೊಡಲೆ?
ಹಸಿರುಡಲೆ? ಕೆಂಪುಡಲೆ? ಕಡಲೆ ಬಣ್ಣದನುಡಲೇ?
ತಿಳಿಯದಾಗಿದೆ ಹೇಳೆ? ಯಾವುದುಡಲೆ?

ಕೆಂಪು ಜರಿ ಸೀರೆಯುಡಬಹುದಾದರದನಂದು
ಸುಂದರಿಯ ಮದುವೆಮನೆಗುಟ್ಟಾಗಿದೆ
ಚಂದವಿದೆಯೆಂದಾ ಚಂದ್ರತ್ತೆ ನೋಡಿರಲು
ಉಟ್ಟಿದುದು ಎಲ್ಲೆಡೆಯೂ ರಟ್ಟಾಗಿದೆ

ಹಸಿರು ಸೆರಗಿನ ಮೆರುಗು ಚಂದಗಾಣಿಸಬಹುದು
ಅದಕೊಪ್ಪುವಾ ರವಿಕೆ ಬಿಗಿಯಾಗಿದೆ
ತಿಳಿನೀಲ ಸೀರೆಯದು ನನಗಿಷ್ಟವಾದರೂ
ಆ ಬಣ್ಣದಾ ಓಲೆ ತುಂಡಾಗಿದೆ

ತುಸು ತೆಳ್ಳಗಿದ್ದರೂ ಕಪ್ಪು ಸೀರೆಯಲಿ ನೀ
ಅಪ್ಸರೆಯ ಹಾಗೆಯೇ ಎಂದವರು ಅಂದು
ಬರುತಿಹರೆ ಮತ್ತಿಂದು ಎಂದು ತಿಳಿವುದು ಹೇಗೆ?
ಅದು ಬೇಡವೇ ಬೇಡ ಹೇಳೆ ಮತ್ತೊಂದು
**05/07/2016**

**90. ರವಿಯ ಬರಹ**

ಕವಿತೆಯೊಂದ ಬರೆವೆನೆಂದು
ರವಿಯು ಪಡುವಣದಲಿ
ಕವಿಯ ಭಾವದಂತೆ ಬಾಗಿ
ಅವಿತನಾ ಕಡಲಲಿ

ಮೌನಜಲಧಿಮಥನಗೈದು
ಗಾನನವನೀತವ
ತಾನನದೊಳು ತಾನೆ ಮೀಟಿ
ಬಾನ ಬಯಲಿಗೆಸೆವ

ಬಿಸಿಲ ಕೋಲ ಬೆಸುಗೆ ಹಾಕಿ
ಮಸೆದು ಬರೆದ ಬೆಳಗ
ಹೊಸ ಚರಣವ ಕುಣಿಕುಣಿಸುತ–
ಲೆಸೆಯೆ ಹಕ್ಕಿ ಬಳಗ

ಮೆದು ಪದಗಳಲೆದೆಗೊದೆಯಲು
ಮಧುಸೂದನನಾಗ
ಹೃದಯ ಬಿರಿದು ಮುದವನೆರೆಯೆ
ಅದುವೆ ಉದಯರಾಗ

**17/08/2016**

## 91. ಕಬ್ಬಿಗ

ಕಬ್ಬಿಗರ ಕಬ್ಬಿಗನು ಭಾವದೊಳಗುಬ್ಬುಬ್ಬಿ
ಹಬ್ಬುತಿರಲೆಲ್ಲೆಲ್ಲೂ ನಮಗೆ ಹಬ್ಬ
ಒಬ್ಬಟ್ಟು, ಸಿಹಿಗಡಬು ಕಜ್ಜಾಯಗಳ ಮೆದ್ದು
ಕಬ್ಬಗಳಲವತರಿಪ ಗಣಪನೊಬ್ಬ

ಅಕ್ಷರಾಕ್ಷರಗಳನು ಹಾರದೊಲು ಪೋಣಿಸುತ
ಅಕ್ಷರವೆ ತಾನಾಗೆ ಗಣಗಳೊಡೆಯ
ತ್ರ್ಯಕ್ಷರದ ಬಂಧವನು ಸೃಷ್ಟಿಸೌಂದರ್ಯದಲಿ
ಸಾಕ್ಷರೀಕರಿಸದನೆ ರಸಗಳೊಡೆಯ

ಮಾತು ತಾ ಮೈಯಿಂದ ಕೊಳೆಯ ಕಳೆಯುವ ವೇಳೆ
ಮತಿಯಲನ್ಯರನೊಳಗೆ ಬಿಡದೆ ಸಾಗೆ
ಮಥಿಸಿ ಒಂದರ್ಥವನು ತಂದು ನಿಲ್ಲಿಸೆ ಹೊರಗೆ
ಪತಿಯಾದ ಮೌನಶಿವ ಬಂದ ಹಾಗೆ

ಒಳಗೆ ಬಿಡೆನೆಂದವನ ಕ್ಷಣದೊಳಗೆ ತಲೆ ಕಡಿಯೆ
ಅಳುವೆ ಮಾತ್ರಾಕಾಲವಾಗಿ ಬಂತೆ?
ಇಳೆಯಗಲ ಸಲಗದಲೆ ಕಡಿದು ಮತ್ತಿಡಲಲ್ಲಿ
ಹೊಳೆದ ಹೊಳೆವುಗಳೆಲ್ಲ ಗಣಗಳಂತೆ

ನಿಯತಛಂದೋ ಗತಿಯ ಗಣನಿಯಾಮಕನಾಗಿ
ಪ್ರಕೃತಿಕಾವ್ಯವ ಬರೆದ ಪ್ರಥಮ ಕವಿಯು
ಕವಿಗಣಕೆ ಕವಿಯಾಗಿ ಅಕ್ಷರದ ಛವಿಯಾಗೆ
ಗಣಪತಿಯು ಜಗದೇಕಕಾವ್ಯಋಷಿಯು

**05/09/2016**

## 92. ನಾನು

ನಾನು ಮಲಗುವವರೆಗೆ ಕಾಯವುದೆ ಕತ್ತಲೆಯು?
ನಾನು ಏಳುವವರೆಗೆ ಕಾಯುವುದೆ ಬೆಳಗು?
ನಾನು ಹುಟ್ಟಿದ ಮೇಲೆ ಹುಟ್ಟಿದುದೆ ಭವಸುಖವು?
ನಾನಿಲ್ಲವೆಂದತ್ತು ಸೊರಗೀತೆ ಜಗವು?

ನಿನ್ನೆಯನು ಮರ್ಶಿಸುತ ನಾಳೆಯನು ಕರ್ಷಿಸುತ
ನಾನಿಂದಿನೀ ಕ್ಷಣವ ಸ್ಪರ್ಶಿಸದೆ ಇರಲು
ಜಗವು ನನ್ನನೆ ನೆಚ್ಚಿ ಇಂದೆ ನಾಳೆಯನೀದು
ಹರ್ಷದಿಂದುಬ್ಬುಬ್ಬಿ ನಲಿದೀತೆ ಹೇಳು?

ಬಾನೊಳಗೆ ನಾನಿದ್ದು ನನ್ನೊಳಗ ಬಾನಿರುವ
ಅರಿವಿನಾ ಹರಹಿನಲಿ ಬಯಲಾಗೆ ನಾನು
ನನ್ನಿರವಿನೊಳ ಹರಿವು ಬಯಲಿರವಿನಲಿ ಬೆಸೆದು
ನಾನಿಲ್ಲದಂತಾಗೆ ಉಳಿದದ್ದೆ ನಾನು

**06/09/2016**

## 93. ಮರವೊಂದು ಮನುಜನಿಗೆ ಹೇಳಿದಂತೆ

ಕೆಳಕುದುರಿ ಮಣ್ಣಿನೊಳು ಬೆರೆತ ಎಲೆಗೊಳಕುಗಳ
ಎಳೆದು ಮತ್ತದನೆ ಫಲವೀಯುವಾ ನಾವು
ಅಳಿದು ಪಳೆಯುಳಿಕೆಯೊಲು ನೆಲಕೆ ಸಾರವನಿತ್ತು
ಬೆಳೆಯ ಕಾಳ್ಗಳಿಗೇರಿ ಕೆಳಗೆ ಬಾಗುವೆವು

ಸಾವಯವ ಸಾರವಿರೆ ಗೋವ ವರದಾನವಿರೆ
ಭಾವರಂಜಕವೀವ ಬಾನು ದನಿಯನೆರೆ
ಯಾವುದೇ ಅನ್ಯರಸಗೊಬ್ಬರಗಳೇತಕ್ಕೆ
ನಾವು ಸಹಕಾರಗಳನೆಲ್ಲೆಡೆಯು ಬೀರೆ

ಎಲೆ ಮನುಜ ನೀನಾಸೆಗಡಿಯಾಳಿನಂತಾಗಿ
ಎಲೆಯ ನಿಜಬೆಲೆಯನೂ ತಿಳಿಯದಿಹೆಯೇಕೆ?
ಕಾಲದಾ ಸಹಜ ಗತಿಯಲ್ಲಿ ಮಾಗುವ ಮುನ್ನ
ಕೊಲೆಗಡುಕನೊಲು ಹಲವು ವಿಷ ಸುರಿವೆಯೇಕೆ?

ಕಾಮಾದಿ ಕೀಟಗಳು ಕೊರೆಯುತಿರಲೊಳಗೊಳಗೆ
ನೀ ಮೊದಲು ಅವುಗಳಿಗೆ ಬೆಂಕಿ ಹಾಕು
ವ್ಯಾಮೋಹರೋಗಕ್ಕೆ ಅದರ ಬೂದಿಯೆ ಸಾಕು
ಭೂಮಾತೆಯೊಲಿಯಲಿಕೆ ಸಾಕುರಿವ ಬೆಳಕು

**30/09/2016**

## 34. ವಾಗರ್ಥಪಕ್ಷಿಗಳು

ವಾಗರ್ಥಶೃಂಗಾರಕೇಲಿಯಾ ಸಮಯದಲಿ
ಅರ್ಥವನು ಕೊಲೆಗೈದ ಪಾಪಿ ನೀನೋ?
ದೇಹದೊಳಗಿರುವಾತ್ಮ ನಿತ್ಯವಾಗಿರುವಂತೆ
ಅರ್ಥಕ್ಕೆ ಸಾವಿಲ್ಲ –ಅಲ್ಲವೇನೋ?

ತನುಮನವು ಮೈಮರೆತು ನಾಮರೂಪವ ಭಜಿಸೆ
ಅರಿವು ಗೋಚರಿಪುದೇ? ಅರಿತು ಹೇಳು
ದೇಹಭಾವವನಳಿಸಿ ಮನದ ಬಾನೊಳಗಿಳಿಸಿ
ಆತ್ಮಾರ್ಥಭಾವಗೀತೆಯನು ಕೇಳು

ವಾಕ್ಸೀತೆಯಪಹರಿಸೆ ಅರ್ಥರಾಮನು ಬಿಡದೆ
ಹತ್ತು ತಲೆಗಳ ಕಡಿದು ಮತ್ತೆ ಪಡೆಯೆ
ಪ್ರಕೃತಿಪುರುಷರ ಹಾಗೆ ಕವಿಋಷಿಯ ಭಾವದೊಳು
ರಾಮಸೀತೆಯ ಹಾಗೆ ಜೀವದಳೆಯೆ
ವಾಗರ್ಥದಂತಿಹುದು ಕ್ರೌಂಚಮಿಥುನ
ವ್ಯಥೆಯೆ ಕತೆಯಾದಂತೆ –ರಾಮಾಯಣ

**15/10/2016**

## 95. ಭೂಮಾತೆ

ಗಂಧವತಿ ಭೂಮಾತೆ ಬಂಧಮೋಕ್ಷವಿದಾತೆ
ಒಂದು ಕೊಡೆ ಹಲವೀವ ಆನಂದಪಾತ್ರೆ
ಎಂದೆಂದಿಗೂ ಸೆರಗ ಹರಹಿನಲಿ ನೆರಳಿತ್ತು
ಕಂದರನು ಪೊರೆಯುತಿಹ ಅನ್ನದಾತೆ

ಹುಣ್ಣಿಮೆಯ ಹೊಂಗಿರಣವೂಡುತಿರೆ ಮಣ್ಣಿನಲಿ
ಕಣ್ಣೆವೆಯನರೆ ತೆರೆದು ಔಷಧವನರೆವೆ
ಬಣ್ಣಗಳಲೂಡಿಸುತ ಮರಬಳ್ಳಿಗಳಿಗೆಲ್ಲ
ತನ್ನೊಲವಿನೊಳಲೆಯೊಳು ತಂಪನೆರೆವೆ

ಹಸಿರ ಕುಡಿಯುಸಿರಿನಲಿ ಬಸಿರೊಡೆದ ಕಾಳ್ಗಳಲಿ
ಹೊಸತನದ ಕುಡಿಯೊಡೆದು ಕೆಂಪಗಾಗೆ
ನಸುನಗುವು ಟಿಸಿಲೊಡೆದು ತೊದಲುಲಿಯ ಮಧುವಾಗಿ
ಹಸುಗೂಸನಾಡಿಸುವ ಲಾಲಿಯಾಗೆ

ಬಾನಗಲ ಮೈದಳೆದ ನಾನು ನಾನೆಂಬುದದು
ಕಾನ ಮಣ್ಣೊಳಗಿಳಿದು ಲೀನವಾಗೆ
ತಾನನದ ದನಿಯೊಂದು ಮರು ಜನ್ಮದಳುವಾಗಿ
ತಾನುಳಿಯೆ ನೀ ಕಾಯೆ ತಾಯಿಯಾಗೆ

**16/10/2016**

## 96. ಬಾ

ಬಗೆಬಗೆಯ ಭಾವಗಳ ಬಣ್ಣದೋಕುಳಿಯಾಗಿ
ಬಾಗಿ ಬಾ ನೀ ಬಯಲ ಬರಹವಾಗಿ
ಆ ಬಯಲೆ ತಾ ಬಯಸಿ ಬಾನ್ದನಿಯ ಒಳಸಾಗಿ
ಬಿಸಜವಾಗರಳುತಿರಲೆದೆಗೆ ತಾಗಿ

ಗಂಧಲೇಪಿತ ಮಂದ ಮಧುವಾತದಿಂದಾಗಿ
ಸೃಷ್ಟಿಸೌಂದರ್ಯರಸವೃಷ್ಟಿಯಾಗಿ
ಹೃದಯಾಭಿಷಿಕ್ತಪದ ತಾ ಸಂಚಲನವಾಗಿ
ಅರ್ಥದರ್ಪಣಭಾವಬಿಂಬವಾಗಿ

ಅಕ್ಷರಾಕ್ಷರಬಂಧದಾನಂದಚೈತನ್ಯ
ತಾನಂತ್ಯರಾಹಿತ್ಯವಿಸ್ತಾರವಾಗಿ
ಪಂಚಭೂತಾತ್ಮ ಪಂಚಾನನಪ್ರೀತ ಪಂ–
ಚಾಕ್ಷರೀಮಂತ್ರದಾ ತಂತುವಾಗಿ

ಪಂಚಕರಣಗಳಿಂದ ಸಂಕರ್ಷಿತೇಕೈಕ–
ದಿಂಚರವು ಸಂತತದ ಧಾರೆಯಾಗಿ
ಧ್ಯಾನಧಾರಣಗಮ್ಯ ವಿಷಯವೇ ತಾನಾಗಿ
ವಾಕ್ಕಾಯಮನಗಳಲಿ ಲೀನವಾಗಿ

ಬಾ ಕಾವ್ಯವಾಗಿ ಬಾ ದಿವ್ಯತೇಜಃಪುಂಜ–
ವಾಗಿ ಹೃತ್ ರಮ್ಯವನಚೈತ್ರವಾಗಿ
ಛಂದೋವಿಲಾಸ ಪ್ರಪಂಚವೇ ಬಾ ಭವ್ಯ–
ನಿತ್ಯಾನುಸಂಧಾನವಾಗರ್ಥವಾಗಿ
ಸಚ್ಚಿದಾನಂದಶಿವಮೂರ್ತಿಯಾಗಿ

**03/11/2016**